ಕಾಯಕವೇ ಕೈಲಾಸ

# ಸಿದ್ಧಗಂಗಾ





ಪರಿಸರ ರಕ್ಷಣೆ ನಮ್ಮೆಲ್ಲರ ಹೊಣೆ

ಸಂಪುಟ : ೫೯ ಜೂನ್ ೨೦೨೩ ಸಂಚಿಕೆ : ೦೬







ನೂತನ ಮುಖ್ಯಮಂತ್ರಿಯಾಗಿ ಶ್ರೀ ಸಿದ್ಧರಾಮಯ್ಯ ಹಾಗೂ ನೂತನ ಉಪ ಮುಖ್ಯಮಂತ್ರಿಯಾಗಿ ಶ್ರೀ ಡಿ.ಕೆ. ಶಿವಕುಮಾರ್ ಅವರು ಕರ್ನಾಟಕ ರಾಜ್ಯಪಾಲರಾದ ಶ್ರೀ ಥಾವರಚಂದ್ ಗೆಹ್ಲೋತ್ ಅವರಿಂದ ಪ್ರತಿಜ್ಞಾನ ವಿಧಿ ಸ್ವೀಕರಿಸಿದರು.



ಹಾಸನ ಜಿಲ್ಲೆ, ಸಕಲೇಶಪುರ ತಾಲ್ಲೂಕಿನ ಹರಗರಹಳ್ಳಿ ಗ್ರಾಮದಲ್ಲಿ ಇತ್ತೀಚೆಗೆ ನಡೆದ ನಂದೀಶ್ವರಸ್ವಾಮಿ ಜಾತ್ರೆ ಮಹೋತ್ಸವ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಬೊಮ್ಮನಕೆರೆ ರಸ್ತೆಯನ್ನು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಹರಗುರು ಚರಮೂರ್ತಿಗಳು, ಗಣ್ಯರು ಹಾಗೂ ಗ್ರಾಮಸ್ಥರು ಉಪಸ್ಥಿತರಿದ್ದರು.



ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕಿನ ಪಡುಗೂರು ಗ್ರಾಮದ ಶ್ರೀ ಅಡವಿ ಮಠದ ಪೂಜ್ಯ ಶ್ರೀ ಶ್ರೀ ಶಿವಲಿಂಗೇಂದ್ರ ಸ್ವಾಮಿಗಳವರ ೬೦ನೇ ಗುರುವಂದನಾ ಮಹೋತ್ಸವ ಸಮಾರಂಭವು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಹಾಗೂ ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ, ಹರಗುರು ಚರಮೂರ್ತಿಗಳ ಉಪಸ್ಥಿತಿಯಲ್ಲಿ ನಡೆಯಿತು. ಅಧ್ಯಕ್ಷತೆ ವಹಿಸಿದ್ದ ಮೈಸೂರು ಅರಮನೆಯ ರಾಜವಂಶಸ್ಥರಾದ ಶ್ರೀ ಯದುವೀರ ಕೃಷ್ಣದತ್ತ ಚಾಮರಾಜ ಒಡೆಯರ್ ಅವರು ನುಡಿನಮನ ಸಲ್ಲಿಸುತ್ತಿರುವುದು.



## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೫೯ ಜೂನ್ ೨೦೨೩ ಸಂಚಿಕೆ : ೦೬


ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು
ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಅಧ್ಯಕ್ಷರು
ಪ್ರಧಾನ ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ
ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ
ಪ್ರಕಾಶಕರು :
ಕೆ.ಬಿ. ಶಿವಶಂಕರಯ್ಯ
ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ವಿ. ಸೋಮಶೇಖರಯ್ಯ
ಎನ್.ವಿ. ಸತೀಶ್‌ಕುಮಾರ್
ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.
ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್
ಬಿ-೭೧, ಕೆ.ಎಸ್.ಎಸ್.ಐ.ಡಿ.ಸಿ. ಕೈಗಾರಿಕನಗರ
ರಾಜಾಜಿನಗರ, ಬೆಂಗಳೂರು-೫೬೦ ೦೧೦



ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104
ದೂ: 0816-2282322.
ಮೊ : 91410 36345
email: siddaganganews@gmail.com


## ಒಳಪುಟಗಳಲ್ಲಿ ..................




| ಚಂದಾ ವಿವರ | ಆಜೀವ ಸದಸ್ಯತ್ವ ರೂ. 1500/- ವಾರ್ಷಿಕ ಚಂದಾ ರೂ. 250.00 ಬಿಡಿ ಪ್ರತಿ ರೂ. 20.00 |
|---|---|





# ಸಂಪಾದಕೀಯ........

ಪರಿಸರ ರಕ್ಷಣೆ ನಮ್ಮೆಲ್ಲರ ಹೊಣೆಯಾಗಬೇಕಿದೆ. ಕಾಡು ಕಡಿದು ನಾಡು ಬೆಳೆಸುವ ಪ್ರವೃತ್ತಿ ಹೆಚ್ಚಾಗುತ್ತಿದ್ದು ಪರಿಸರದ ಮೇಲೆ
ಪ್ರತಿಕೂಲ ಪರಿಣಾಮ ಬೀರುತ್ತಿದೆ. ನಾವಿಂದು ಸುಸ್ಥಿರ ಅಭಿವೃದ್ಧಿಯ ಮಾದರಿಯನ್ನು ಕಡೆಗಣಿಸಿದ ಫಲವೇ ಎಲ್ಲ ದಿಕ್ಕುಗಳಲ್ಲಿ
ಪರಿಸರಕ್ಕೆ ಹಾನಿಯಾಗುತ್ತಿದೆ. ಪರಿಸರಕ್ಕೆ ಆಗುತ್ತಿರುವ ಹಾನಿಯನ್ನು ನಾವು ಅಗತ್ಯ ಹಾಗೂ ಪರಿಣಾಮಕಾರಿ ಕ್ರಮಗಳನ್ನು
ಕೈಗೊಳ್ಳದಿದ್ದರೆ ಅಭಿವೃದ್ಧಿಯ ಉಳಿದ ಪ್ರಕ್ರಿಯೆಗಳು ಹೊಳೆಯಲ್ಲಿ ಹುಣಸೆ ಹುಳಿಯನ್ನು ಹಿಂಡಿದಂತಾಗುತ್ತದೆ. ವಾಯು, ಶಬ್ದ, ಜಲ
ಮಾಲಿನ್ಯದ ಪ್ರಮಾಣ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಿರುವುದು ಎಚ್ಚರಿಕೆಯ ಗಂಟೆ ಎಂಬುದನ್ನು ನಾವು ಅರ್ಥಮಾಡಿಕೊಂಡು ಹೆಜ್ಜೆ
ಇಡಬೇಕಾದ ಅನಿವಾರ್ಯತೆ ಈಗ ನಮ್ಮ ಮುಂದಿದೆ. ಸಮೀಕ್ಷೆಯೊಂದರ ಪ್ರಕಾರ ಭಾರತದಲ್ಲಿ ವಾಯುಮಾಲಿನ್ಯದಿಂದ ಉಂಟಾಗುವ
ಸಾವಿನ ಪ್ರಮಾಣದಲ್ಲಿ ತೀವ್ರ ಏರಿಕೆ ಕಂಡುಬಂದಿದೆ. ಈ ಪ್ರಮಾಣ ಕಳೆದ ಎರಡು ದಶಕಗಳಲ್ಲಿ ಎರಡೂವರೆ ಪಟ್ಟು ಹೆಚ್ಚಳವಾಗಿದೆ
ಎಂದು ವಿಜ್ಞಾನ ಮತ್ತು ಪರಿಸರ ಕೇಂದ್ರದ (ಸಿಎಸ್ಇ) ಹೊಸ ಅಧ್ಯಯನ ವರದಿ ಮಾಡಿದೆ. ವಾಯುಮಾಲಿನ್ಯದಿಂದ ಜಾಗತಿಕವಾಗಿ
೬೬.೭೦ ಲಕ್ಷ ಜನರು ಪ್ರಾಣ ಕಳೆದುಕೊಂಡಿದ್ದು, ಈ ಪೈಕಿ ಭಾರತವೊಂದರಲ್ಲೇ ೧೬.೭೦ ಲಕ್ಷ ಜನರು ಸಾವನ್ನಪ್ಪಿದ್ದಾರೆ.
ವರದಿಯೊಂದರ ಪ್ರಕಾರ ಭಾರತದಲ್ಲಿ ಸಂಭವಿಸುತ್ತಿರುವ ಪ್ರತಿ ನಾಲ್ಕು ಸಾವುಗಳಲ್ಲಿ ಒಂದು ಸಾವು ವಾಯುಮಾಲಿನ್ಯದಿಂದ
ಸಂಭವಿಸುತ್ತಿದೆ. ಭಾರತದ ನಗರಗಳಲ್ಲಿ ವಾಯು ಗುಣಮಟ್ಟ ಸೂಚ್ಯಂಕ ಅಪಾಯದ ಗಡಿಯನ್ನು ಮೀರುತ್ತಿದೆ. ಪ್ರಸ್ತುತ
ವಾಯುಮಾಲಿನ್ಯದ ಪ್ರಮಾಣವನ್ನು ಕಡಿಮೆ ಮಾಡದಿದ್ದರೆ ಮತ್ತಷ್ಟು ಸಮಸ್ಯೆ ಎದುರಿಸಬೇಕಾಗುತ್ತದೆ. ಪರಿಸರಕ್ಕೆ ಹಲವು ರೀತಿಯಲ್ಲಿ
ನಷ್ಟ ಉಂಟಾಗುತ್ತಿರುವ ಮಾನವ ನಿರ್ಮಿತ ಕೃತ್ಯಗಳನ್ನು ಗಂಭೀರವಾಗಿ ಪರಿಗಣಿಸದಿದ್ದರೆ ದೊಡ್ಡಬೆಲೆಯನ್ನು ತೆರಬೇಕಾಗುತ್ತದೆ.

ಪರಿಸರ ವೈಪರೀತ್ಯದಿಂದ ತಾಪಮಾನ ಹೆಚ್ಚಳ ಇತ್ತೀಚಿನ ವರ್ಷಗಳಲ್ಲಿ ಜಾಗತಿಕವಾಗಿ ಎಲ್ಲ ದೇಶಗಳನ್ನು ಕಳವಳಕ್ಕೆ ಈಡು
ಮಾಡಿದೆ. ಇದಕ್ಕೆ ಕಾರಣ ತಾಪಮಾನ ೭ ಡಿಗ್ರಿ ಸೆಲ್ಸಿಯಸ್‌ನಷ್ಟು ಹೆಚ್ಚಿದ್ದರೂ, ಅದರಿಂದ ಹಿಮಪರ್ವತಗಳು, ಸಮುದ್ರಗಳು ಹಾಗೂ
ಒಟ್ಟಾರೆಯಾಗಿ ಪರಿಸರದ ಮೇಲೆ ಅನೇಕ ಬಗೆಗಳಲ್ಲಿ ಪರಿಣಾಮವಾಗಿ ಮಳೆ ಬೆಳೆ ವಿಷಯದಲ್ಲೂ ಏರುಪೇರುಗಳಾಗುತ್ತವೆ. ಇದರ
ಜತೆಗೆ ಮಾನವನ ಆರೋಗ್ಯದ ಮೇಲೂ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ದುಷ್ಪರಿಣಾಮ ಬೀರುತ್ತದೆ ಎಂಬುದನ್ನು ಮರೆಯಬಾರದು.
ತಾಪಮಾನ ಏರಿಕೆಯ ದುಷ್ಪರಿಣಾಮಗಳು ಈಗಾಗಲೇ ಕಂಡುಬರುತ್ತಿದ್ದು ಅಕಾಲಿಕ ಮಳೆ ಹಾಗೂ ಬಿಸಿಲು ಅನುಭವಕ್ಕೆ ಬರುತ್ತಿವೆ.
ತಾಪಮಾನ ಬದಲಾವಣೆಯಿಂದ ವಿಶ್ವದಲ್ಲಿ ಹೊಸ ಸಾಂಕ್ರಾಮಿಕ ರೋಗಗಳು ಹೆಚ್ಚುವ ಸಾಧ್ಯತೆ ಅಧಿಕವಾಗಿದೆ ಎಂದು
ಅಧ್ಯಯನವೊಂದು ಹೇಳಿರುವುದು ಕಳವಳಕಾರಿಯಾಗಿದೆ. ೨೦೭೦ರ ವೇಳೆಗೆ ಪ್ರಾಣಿ ಸಂಕುಲದಲ್ಲಿ ಸಾವಿರಾರು ಹೊಸ ವೈರಸ್‌ಗಳು
ಹರಡಬಹುದು. ಅವುಗಳಿಂದ ಸಾಂಕ್ರಾಮಿಕ ರೋಗಗಳುಂಟಾಗಿ ಮಾನವರಿಗೂ ಕಂಟಕವಾಗಬಹುದು. ಹಿಂದಿನ ವರ್ಷಗಳಿಗೆ
ಹೋಲಿಸಿದರೆ ತಾಪಮಾನ ಹೆಚ್ಚಳ ಪ್ರಮಾಣ ಈಗ ಜಾಸ್ತಿಯಾಗಿದೆ. ಇದರಿಂದ ಉಷ್ಣಮಾರುತಗಳು ಹಾಗೂ ಕಾಡ್ಗಿಚ್ಚು ಕೂಡ
ಹೆಚ್ಚಾಗಿದೆ. ಇನ್ನೊಂದೆಡೆ ಮರುಭೂಮಿ ಪ್ರಮಾಣದಲ್ಲಿ ಏರಿಕೆಯಾಗಿದೆ. ಕೈಗಾರಿಕೆಗಳಿಂದ ಹೊರಬರುವ ತ್ಯಾಜ್ಯ, ಅತಿಯಾದ
ನಗರೀಕರಣ, ಅರಣ್ಯ ನಾಶ, ಮಾಲಿನ್ಯಕಾರಕ ವಸ್ತುಗಳ ಅತಿಯಾದ ಬಳಕೆ, ವಾಹನಗಳಿಂದ ಹೊರಸೂಸುವ ಹೊಗೆ, ಹೀಗೆ ಬೇರೆ
ಬೇರೆ ಕಾರಣಗಳಿಂದಾಗಿ ಮಾಲಿನ್ಯ ದಿನೇದಿನೇ ಹೆಚ್ಚಾಗಿದೆ.

ಪರಿಸರ ರಕ್ಷಣೆ ಸರ್ಕಾರ ಒಂದರಿಂದಲೇ ಸಾಧ್ಯವಾಗುವುದಿಲ್ಲ. ಸರ್ಕಾರದ ಜತೆಗೆ ಸಾರ್ವಜನಿಕರ ಸಹಭಾಗಿತ್ವವೂ
ಅಗತ್ಯವಾಗಿದೆ. ಪರಿಸರ ರಕ್ಷಣೆ ಪ್ರತಿಯೊಬ್ಬರ ಕರ್ತವ್ಯವೆಂದು ಭಾವಿಸಿ ಕಾರ್ಯೋನ್ಮುಖರಾದಾಗ ನಿರೀಕ್ಷಿಸಿದಷ್ಟು ಆಗದಿದ್ದರೂ
ಕೊಂಚ ಮಟ್ಟಿಗಾದರೂ ಸಾಕಾರವಾಗುವುದರಲ್ಲಿ ಸಂಶಯವಿಲ್ಲ. ಪರಿಸರ ರಕ್ಷಣೆ ನಿಟ್ಟಿನಲ್ಲಿ ಸರ್ಕಾರ ಈಗಾಗಲೇ ಅನೇಕ
ಯೋಜನೆಗಳನ್ನು ಹಮ್ಮಿಕೊಂಡು ಕಾರ್ಯೋನ್ಮುಖವಾಗಿದ್ದರೂ ನಿರೀಕ್ಷಿಸಿದಷ್ಟು ಪ್ರಗತಿ ಕಂಡು ಬಂದಿಲ್ಲ ಎಂಬುದು ಕಟುಸತ್ಯ.
ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ ಸಂಸ್ಥೆ ನಡೆಸಿರುವ ಅಧ್ಯಯನದ ಪ್ರಾಥಮಿಕ ವರದಿಯ ಪ್ರಕಾರ ಕಳೆದ ಐದು ವರ್ಷಗಳಲ್ಲಿ
ಪ್ರಾಕೃತಿಕ ವಿಕೋಪಗಳಿಂದ ೨೫೦೦ ಕೋಟಿ ರೂ.ಗಳಷ್ಟು ಹಾನಿಯಾಗಿದೆ. ಹಸಿರೀಕರಣ ಸೇರಿದಂತೆ ಹಲವು ಕಾರ್ಯಕ್ರಮಗಳು
ಯಾವುದೇ ರೀತಿಯ ಪೂರ್ವಾಗ್ರ ಪೀಡಿತರಾಗದೆ ಅನುಷ್ಠಾನಗೊಳ್ಳುವ ನಿಟ್ಟಿನಲ್ಲಿ ಪ್ರಾಮಾಣಿಕ ಪ್ರಯತ್ನ, ಇಚ್ಛಾಶಕ್ತಿಯನ್ನು ಸರ್ಕಾರ
ಪ್ರದರ್ಶಿಸಬೇಕಾಗಿದೆ. ಈ ಕಾರ್ಯಕ್ರಮಗಳು ಸಾಕಾರವಾಗಲು ಸಂಘ ಸಂಸ್ಥೆಗಳ, ಸಾರ್ವಜನಿಕರ ಸಹಭಾಗಿತ್ವವೂ ಮುಖ್ಯವಾಗಿ
ಬೇಕು.

* * *

ನೂತನ ಸರ್ಕಾರ ಅಸ್ತಿತ್ವಕ್ಕೆ ಬಂದಿದೆ. ಸರ್ಕಾರ ಪ್ರಗತಿಪರ ಯೋಜನೆಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ
ಅನುಷ್ಠಾನಗೊಳಿಸುವುದರ ಮೂಲಕ ತನ್ನ ಬದ್ಧತೆಯನ್ನು ಪ್ರದರ್ಶಿಸಿ ಜನರ ಆಶೋತ್ತರಗಳನ್ನು ಈಡೇರಿಸುವ ನಿಟ್ಟಿನಲ್ಲಿ ಪ್ರಾಮಾಣಿಕ
ಪ್ರಯತ್ನ ಮಾಡಲಿ ಎಂದು 'ಸಿದ್ಧಗಂಗಾ' ಹಾರೈಸುತ್ತದೆ.

**ಸಂಪಾದಕರು**







## ಶ್ರೀವಾಣಿ

# ಮನದ ಕೋಪ ತನ್ನ ಅರಿವಿನ ಕೇಡು

'ತನಗೆ ಮುನಿವರಿಗೆ ತಾ ಮುನಿಯಲೇಕಯ್ಯಾ
ತನಗಾದ ಆಗೇನು ಅವರಿಗಾದ ಚೇಗೇನು
ತನುವಿನ ಕೋಪ ತನ್ನ ಹಿರಿತನದ ಕೇಡು
ಮನದ ಕೋಪ ತನ್ನ ಅರಿವಿನ ಕೇಡು
ಮನೆಯೊಳಗಣಕಿಚ್ಚು ತನ್ನ ಮನೆಯ ಸುಟ್ಟಲ್ಲದೆ
ನೆರೆಮನೆಯ ಸುಡುವುದೆ ಕೂಡಲಸಂಗಮದೇವ'

ಹಿಂದೆ ಕೌಶಿಕನೆಂಬ ಮುನಿಯಿದ್ದ. ಅವನು ಅರಣ್ಯದ ಒಂದು ಮರದಡಿಯಲ್ಲಿ ನಿಯತವಾಗಿ ತಪಸ್ಸು ಮಾಡುತ್ತಿದ್ದು, ಹಸಿವಾದಾಗ ಪಕ್ಕದ ಗ್ರಾಮಕ್ಕೆ ಭಿಕ್ಷಾಟನೆಗೆ ಹೋಗುತ್ತಿದ್ದ. ಹೀಗೆ ತಪಸ್ಸು ಮಾಡುತ್ತಿದ್ದಾಗ ಒಂದು ದಿನ ಮರದ ಮೇಲಿದ್ದ ಪಕ್ಷಿಯೊಂದು ಅವನ ಮೇಲೆ ಮಲ ಮೂತ್ರ ಮಾಡಿತು. ಆಗ ಆ ಮುನಿ ಎಚ್ಚರಗೊಂಡು ಕೋಪದಿಂದ ಆ ಪಕ್ಷಿಯನ್ನು ದಿಟ್ಟಿಸಿ ನೋಡಿದ. ಪಕ್ಷಿ ಸುಟ್ಟು ಹೋಗಿ ಕೆಳಗೆ ಬಿತ್ತು. ತನ್ನ ತಪಸ್ಸು ಸಿದ್ಧಿಯಾಗಿದೆ ಎಂದು ಸಂತೋಷಪಟ್ಟ. ಅಹಂಕಾರಪಟ್ಟ. ನಂತರ ಸ್ನಾನ ಮಾಡಿ ಮಡಿಯುಟ್ಟು ಭಿಕ್ಷಾಟನೆಗೆ ಗ್ರಾಮಕ್ಕೆ ಹೊರಟ.

ಒಂದು ಮನೆಯ ಮುಂದೆ ನಿಂತು 'ಭವತಿ ಭಿಕ್ಷಾಂ ದೇಹಿ' ಎಂದು ಕೂಗಿದ. ಆ ಮನೆಯೊಡತಿ ಸಾಧ್ವಿ ಪರಮಜ್ಞಾನಿ ಹೆಂಗಸು. ಆಗ ತಾನೆ ದುಡಿದು ದಣಿವಾಗಿ ಬಂದ ಪತಿಯ ಉಪಚಾರದಲ್ಲಿ ನಿರತಳಾಗಿದ್ದಳು. ಹಾಗಾಗಿ ಒಂದೆರೆಡು ನಿಮಿಷ ತಡವಾಗಿ ಭಿಕ್ಷೆ ನೀಡಲು ಬಂದಳು. 'ಅಯ್ಯಾ ಮುನಿಯೆ! ಹಾಗೆ ನೀನು ದುರುಗುಟ್ಟಿ ನೋಡಿದರೆ ನಾನೇನು ಸುಟ್ಟು ಹೋಗಲು ನಾನು ಆ ಪಕ್ಷಿಯಲ್ಲ' ಎಂದು ಸಮಾಧಾನಿಯಾಗಿ ಹೇಳಿದಳು. ಅವಳ ಮಾತನ್ನು ಕೇಳಿ ಮುನಿಗೆ ಪರಮಾಶ್ಚರ್ಯವಾಯಿತು. ಅವಾಕ್ಕಾಗಿ ಜೊತೆಗೆ ಅಹಂಕಾರವೂ ನಿರಸನವೂ ಆಯಿತು. ಆಗ 'ತಾಯೆ! ನೀನು ಪರಮಜ್ಞಾನಿಯೇ ಇರಬೇಕು. ನನ್ನದು ತಪ್ಪಾಯಿತು. ದಯವಿಟ್ಟು ನನಗೆ ಧರ್ಮದ ಮರ್ಮವನ್ನು ಅರುಹು' ಎಂದು ಬೇಡಿಕೊಂಡ. ಆಗ ಆ ತಾಯಿ 'ನನಗಿಂತಲೂ ಒಬ್ಬ ಮಹಾನ್ ಧರ್ಮಜ್ಞನಿದ್ದಾನೆ. ಇದೇ ಮಾರ್ಗದಲ್ಲಿ ಮುಂದೆ ಹೋಗು. ಅವನ ಹೆಸರು ಧರ್ಮವ್ಯಾಧ ಎಂದು. ಆತನು ಧರ್ಮರಹಸ್ಯವನ್ನು ಬಲ್ಲವನು' ಎಂದಳು. ಆಗ ಕೌಶಿಕ ಮುನಿ ಆಕೆಗೆ ನಮಸ್ಕರಿಸಿ ಹೊರಟುಬಂದ. ಧರ್ಮವ್ಯಾಧನನ್ನು ಭೇಟಿ ಮಾಡಿ ಧರ್ಮರಹಸ್ಯವನ್ನು ತಿಳಿದುಕೊಂಡ. ಮನದಕೋಪ ತನ್ನ ಅರಿವಿನ ಕೇಡು ಎಂದು ತಿಳಿದ. ■

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ

ಎಲ್ಲರು ಅಹುದೆಂಬುದು ಪ್ರಮಾಣವಲ್ಲ ಕಾಣಿರೊ ।
ಎಲ್ಲರು ಅಲ್ಲವೆಂಬುದು ಪ್ರಮಾಣವಲ್ಲ ಕಾಣಿರೊ ।
ಅದೇನು ಕಾರಣವೆಂದಡೆ ಶಿವಶರಣರ ಹೃದಯದ ಅಂತಸ್ಥವನರಿಯರಾಗಿ,
ಎನ್ನ ಅಹುದೆಂಬುದನು ಅಲ್ಲವೆಂಬುದನು, ಮನ್ಮನೋಮೂರ್ತಿ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ ನೀನೆ ಬಲ್ಲೆ ॥

ಎಲ್ಲರು – ದ್ವೈತಾದ್ವೈತಿಗಳು ಭಿನ್ನಯೋಗಾಭ್ಯಾಸಿಗಳು, ಅಹುದೆಂಬುದು – ಶಿವಶರಣರೆ ಶಿವಸ್ವರೂಪಿಗಳಹುದೆಂಬುದು, ಪ್ರಮಾಣವಲ್ಲ – ಮಿತ್ರವಲ್ಲವು, ಕಾಣಿರೊ – ಕಂಡಿರೊ, ಎಲ್ಲಿರ – ದ್ವೈತಾದ್ವೈತ ಭಿನ್ನ ಯೋಗಾಭ್ಯಾಸಿಗಳು, ಅಲ್ಲವೆಂಬುದು – ಶಿವಶರಣರೆ ಶಿವಸ್ವರೂಪಿಗಳು ಅಲ್ಲಬೆಂಬುದು, ಪ್ರಮಾಣವಲ್ಲ – ಮಿತವಲ್ಲವು, ಕಾಣಿರೊ-ಕಂಡಿರೊ, ಅದೇನು ಕಾರಣವೆಂದಡೆ – ಅದೇನು ನಿಮಿತ್ತಾರ್ಥವಯ್ಯಾ ಸ್ವಾಮಿ ಎಂದು ಬೆಸಗೊಂಡಡೆ, ಶಿವಶರಣರ-ಹರಶರಣರ, ಹೃದಯಂತಸ್ಥವ-ಅಂತರಂಗದ ಒಳವಿಚಾರವನು, ಅರಿಯರಾಗಿ-ತಿಳಿಯರಾಗಿ, ಎನ್ನಹುದೆಂಬುದನು-ಶಿವಶರಣರೆ ಶಿವಸ್ವರೂಪಿಗಳಹುದೆಂದು ಪೇಳು ವಂಥಾದ್ದನ್ನು, ಅಲ್ಲಾಯೆಂಬುದನು-ಶಿವಶರಣರೆ ಶಿವಸ್ವರೂಪಿ ಗಳಲ್ಲಾಯೆಂದು ಕೊಳ್ಳುವಂಥಾದ್ದನ್ನು, ಮನ್ಮನೋಮೂರ್ತಿ ಮನಕ್ಕೆ ಕರ್ತೃವಾದ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ – ಷಡ್ವಿಧಲಿಂಗಸ್ವರೂಪವಾದ ಎಲೇ ಪರಶಿವಲಿಂಗವೆ, ನೀನೆ ಬಲ್ಲೆ – ನಿಮಗರಿಯ ಬರುವುದು.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು-ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಯಾರ್‍ಯಾರ ಪುಣ್ಯವೋ ಯಾರ್‍ಯಾರ ಭಾಗ್ಯವೋ
ಲೋಕ ಪುಣ್ಯವಾಗಿ ಬೆಳಗಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಎಚ್ಚರಿಕೆಯ ಕೂಟದಿ ನಿತ್ಯಸುಖಿಯಾಗಿರುವ
ಸಚ್ಚರಿತ ಜಗದೊಳು ಶಿವನಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಇಹಪರವ ಗೆದ್ದಿರುವ ಪರಮಾನಂದರೂಪಿ
ಹಿಂದು ಮುಂದನು ಮರೆದ ಮಹಾಬೆಳಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆರೂಢಜ್ಞಾನಿಯೆ ಅನುಭಾವ ಶಿಖರವೆ
ಸ್ಥಲ ಮೀರಿ ನಡೆದಿರುವ ನೆಲದೊಲವೆ ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದೇಹಧರ್ಮವ ಗೆದ್ದು ಭಾವಶುದ್ಧಿಯ ಬೆಳಗಿ
ಯೋಗತಾಗವನೆಲ್ಲ ಮೂರ್ತಿಸಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಇಲ್ಲಿಲ್ಲದ ಕೈಲಾಸ ಮತ್ತೆಲ್ಲಿ ಇಹುದೆಂದು
ಮಕ್ಕಳಾಟದೊಳು ಇಹುದೆಂದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಸೆ ಮನದ ಕೊನೆಯ ಕೈಲಾಸದಡಿಗಲ್ಲು
ಈಶನರಿವ ಸೊಲ್ಲೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿತ್ಯತೃಪ್ತನಾದೆ ನಿತ್ಯಸಂತೋಷಿಯಾದೆ
ಸತ್ಯದಾಚರಣೆಯ ಗುರುವಾದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಂಥೆ ತೊಟ್ಟವರೆಲ್ಲ ಗುರುವಾಗಬಲ್ಲರೆ
ಕಾವಿ ಹೊದ್ದವರೆಲ್ಲ ಜಂಗಮರೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಟ್ಟಿದ ಲಿಂಗವ ಕಿರಿದು ಮಾಡಲು ಬೇಡ
ಕಟ್ಟ ಕಡೆಯವರೆಗೆ ಬಿಡಬೇಡ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪ್ರೊ. ಹೆಚ್.ವಿ. ವೀರಭದ್ರಯ್ಯ



## ನೆನಪಿನಂಗಳದಿಂದ

# ಜಗತ್ತು ಕಂಡ ಅಪರೂಪದ ಜಂಗಮ

– ಡಾ. ಆರ್. ಚಿಲುಮಿ, ಬೆಳಗಾವಿ

ಅವರ ನಡೆ ಪರುಷ, ನುಡಿ ಪರುಷ, ಜೀವನ ದರ್ಶನವೇ ಪರುಷವೆಮಗೆ ! ನಿತ್ಯವೂ ನವನವೋನ್ಮೇಷ ಶಾಲಿನಿ, ನಗುಮೊಗದ ಚಿತ್ಕಳೆ, ಚಿದ್ಬಿಂದು ಸಾಕ್ಷಾತ್ ಅವರ ಪ್ರತಿರೂಪವೇ ತಾವಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು. ಇವರು ಯಾವಾಗಲೂ 'ಬಾಗಿದ ತಲೆಯ ಮುಗಿದ ಕೈಯ ಬಸವ' ನಂತಿರುವ ಆಧುನಿಕ ಬಸವಣ್ಣನವರೇ. ಅವರು ಶ್ರೀಮಠದ ಪರಂಪರೆಯನ್ನು ಮುಂದುವರೆಸಿಕೊಂಡು ಬಂದ ಪುಣ್ಯಪುರುಷರು. ಶ್ರೀಗಳವರ ದರ್ಶನ ಭಾಗ್ಯ ಮಾಡಿಕೊಂಡವರಿಗೆ ಪುಣ್ಯಪ್ರಾಪ್ತಿಯಾಗಬಲ್ಲದೆಂಬ ಮನೋಧೈರ್ಯ ನನ್ನದು. ನಡೆದಾಡುವ ದೇವರೆಂದೇ ಖ್ಯಾತಿ ಹೊಂದಿದ ಪೂಜ್ಯರು ಚತುರ್ಭಾಷಾ ಕೋವಿದರು. ನಾಡು-ಹೊರನಾಡು, ದೇಶ-ವಿದೇಶಗಳಲ್ಲೂ ಶ್ರೀಗಳವರ ಸೇವಾನುರಾಗವು ದಾಂಗುಡಿಯಿಟ್ಟಿದೆ. ಅವರ ಕೈಂಕರ್ಯ, ವಿನಯಶ್ರೀ ಎಷ್ಟು ದೂರದವರೆಗೆ ವ್ಯಾಪಿಸಿದೆಯೆಂಬುದಕ್ಕೆ ಬಸವಣ್ಣನವರ ವಚನಕ್ಕೆ ತಕ್ಕಂತೆ ಆಚರಣೆಗೆ ತಂದ ಸಂತ-ಮಹಂತರಿವರು–

**'ಭಕ್ತದೇಹಿಕ ದೇವನಪ್ಪ ದೇವನು ಸದ್ಭಕ್ತರ ಬಳಿಯಲ್ಲಿ**
**ಬಪ್ಪನಾಗಿ, ಆಳ್ದನು ಬರಲು ಆಳು ಮಂಚದ ಮೇಲೆ**
**ಇಪ್ಪುದು, ಗುಣವೇ ಹೇಳಾ ಕೂಡಲಸಂಗಮದೇವಾ?**
**ಜಂಗಮರೂಪಾಗಿ ಸಂಗಯ್ಯ ಬಂದಾನೆಂದು**
**ಎಂದೆಂದೂ ನಾನು ಮಂಚವನೇರದ ಭಾಷೆ ।'**

ಹೌದು, 'ತನ್ನನರಸಿ ಬಪ್ಪವರ ತಾನರಸಿ ಬಪ್ಪ' ಪರಮಾತ್ಮ ತನ್ನ ಸದ್ಭಕ್ತರ ಬಳಿಗೆ ಭಕ್ತರ ರೂಪದಲ್ಲಿಯೇ ಬರುತ್ತಿರುತ್ತಾನೆ. ಆಳ್ದನು ಬಂದಾಗ ಆಳು ಮಂಚದ ಮೇಲಿರಬಹುದೆ? ಸಂಗಮನು ಯಾವಾಗ ಜಂಗಮರೂಪವಾಗಿ ಬರುವನೋ ಹೇಳಲಾಗದು. ಆತ ಬಂದಾಗ ಅವಸರವಸರವಾಗಿ ಮಂಚವನ್ನಿಳಿಯುವೆನೆಂದರೆ ಆಗುವುದೆ? ಸಾಧ್ಯವೇ ಇಲ್ಲ. ಆದುದರಿಂದ ಎಂದೆಂದೂ ಮಂಚವನ್ನೇರದ ಭಾಷೆ ತೊಟ್ಟ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಸ್ವಾಮಿಜಿಯವರನು ಸ್ವತಃ ನಾನು ಸಂಕ್ರಾಂತಿಯ ದಿನದಂದು ಉಪನ್ಯಾಸಕ್ಕೆಂದು ಶ್ರೀಮಠಕ್ಕೆ ಹೋಗಿದ್ದೆ. (೨೦೧೧) ಖುದ್ದಾಗಿ ಶ್ರೀಗಳವರ ದರ್ಶನ ಭಾಗ್ಯ ಪಡೆದೆ. ಅಲ್ಲಿಯ ಪಾವನ, ಪವಿತ್ರ ಸ್ಥಳದ ಮಹಿಮೆಯು ಸಾಕ್ಷಾತ್ ಶಿವಲೋಕದ ಕೈಲಾಸವನ್ನೂ ಮೀರಿಸುವಂತಿದೆ. ಸಮಯಕ್ಕೆ ಸರಿಯಾಗಿ ಕಾರ್ಯಕ್ರಮ ಕಾರ್ಯಕಲಾಪ ಮತ್ತು ಚಟುವಟಿಕೆಗಳು ನಡೆಯುತ್ತಿರುವುದನ್ನು ಮನಮುಖೇನ ವೀಕ್ಷಿಸಿದೆ. ಬಸವಣ್ಣನವರ ವ್ಯಕ್ತಿತ್ವಕ್ಕೆ ಮಾರುಹೋದ ಮತ್ತು ಶರಣ ಸಾಹಿತ್ಯವನ್ನು ಅಧ್ಯಯನ ಮಾಡುತ್ತಾ ಅದರಂತೆ ಸಾಧ್ಯವಿದ್ದಷ್ಟು (ಸಂಸಾರಸ್ಥ ನಾದರೂ) ಪಾಲಿಸುತ್ತಲಿರುವ ನಾನೂ ಮರುಳಾಗಿ ಹೋಗಿ; ಸಿದ್ಧಗಂಗಾ ಶ್ರೀಮಠವೇ ಪವಿತ್ರ ದಕ್ಷಿಣ ಕಾಶೀ ಕ್ಷೇತ್ರ; ಇಲ್ಲಿ ದಿನನಿತ್ಯವೂ ನಡೆಯುತ್ತಲಿರುವ ಕಾರ್ಯಕ್ರಮದ ವೈಖರಿಯನ್ನು ಮನವಾರೆ ನೋಡಿ ರೂಢಿಗೆ ತಂದರೆ ಸಾಕು ಪ್ರತಿಯೊಬ್ಬ ಮಾನವನೂ ಮಹಾಮಾನವನಾಗಬಲ್ಲನೆಂಬ ಪ್ರತೀತಿಯೆನಿಸುವಂತಿದೆ. ಆದುದರಿಂದ ಕಾಯಕ ದಾಸೋಹದ ಸೇವೆ ನಿತ್ಯವೂ ನಡೆಯುವುದು. ಇದು ಪುಣ್ಯಕಾರ್ಯ. ಒಟ್ಟಿನಲ್ಲಿ ಶ್ರೀಮಠದಲ್ಲಿ ಜರುಗುತ್ತಿರುವ 'ಕಾರ್ಯಕ್ರಮಗಳೇ ಕೈಲಾಸ'ವೆಂಬುದಾಗಿ ಕಂಡಿತೆನಗೆ. ಸಾಮಾನ್ಯವಾಗಿ ಬಸವಣ್ಣನವರ ಹೇಳಿಕೆಯಂತೆ 'ಕಾಯಕವೇ ಕೈಲಾಸ – ಕಾಯವೇ ಕೈಲಾಸ' ಅಥವಾ 'ದೇಹವೇ ದೇವಾಲಯ' ಎಂಬೀ ಮಾತುಗಳು ವಚನ ಸಾಹಿತ್ಯದಿಂದ ಬಂದ ಮಾತಾಗಿವೆ. ಕಲ್ಯಾಣದನುಭವವೇ ತುಮಕೂರು ಸಿದ್ಧಗಂಗಾ ಶ್ರೀಮಠದಲ್ಲಿ ಹೆಪ್ಪುಗಟ್ಟಿದೆ, ಕೆನೆಗಟ್ಟಿದೆ.

ಜಗದ್ಗುರುಗಳು, ಪೀಠಾಧಿಪರಿಗಳೆನಿಸಿಕೊಳ್ಳುವವರು, ಎನಿಸಿಕೊಂಡವರು ಎಲ್ಲರಿಗಿಂತಲೂ ಎತ್ತರದ ಪೀಠವನ್ನೇ ಬಯಸುವ, ಮಠಾಧೀಶರಿಂದು ತುಂಬಿ ತುಳುಕುತ್ತಿದ್ದಾರೆ. ಆದರೆ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ







ಮಹಾಸ್ವಾಮಿಗಳವರು ಯಾವಾಗಲೂ ಆಸೀನರಾಗುತ್ತಿರುವ ಆಸನ ಬೆತ್ತದ ಕುರ್ಚಿ- ಅದರ ಮೇಲೆ ಸೀದಾ-ಸಾದಾ, ಸಾಮಾನ್ಯರೇ ಉಪಯೋಗಿಸುವಂತಹ ಆಸನದ ವ್ಯವಸ್ಥೆಯಿದ್ದುದನ್ನು ಕಂಡೆ ! ಶ್ರೀಗಳವರು ಆಧುನಿಕ ಬಸವಣ್ಣ (ಬಸವಣ್ಣನವತಾರಿಗಳು)ನವರೆಂದು ಕರೆಯುವುದರಲ್ಲಿ ನಿಜವಿದೆ. ಏಕೆಂದರೆ ಅಣ್ಣನವರಂತೆ ಜಗತ್ತಿನ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಆಕಾಶದಲ್ಲಿ ತೇಜೋಮಯವಾಗಿ ಕಂಗೊಳಿಸುವ ದಿವ್ಯಬೆಳಕು ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳಲ್ಲಿದೆ. ಅಲ್ಲದೆ ನಾನು ಕಂಡಂತೆ ವಿಶ್ವಮಾನವ-ವಿಶ್ವಬಂಧು-ಇವನಾರವ ಇವನಾರವನೆಂದೆನ್ನದೆ ಇವನಮ್ಮವ -ಇವನಮ್ಮವ ಎಂಬೋಕ್ತಿಯಂತೆ ಬಸವಣ್ಣನವರ ದಿವ್ಯ ಮತ್ತು ಅಮೂಲ್ಯ ಸಂದೇಶವನ್ನು ನಾಡಿನ ಅದರಲ್ಲೂ ಗ್ರಾಮೀಣ ಬಂಧು ಭಗಿನಿಯರಿಗೆ ತಿಳಿಯಪಡಿಸುವ ಗ್ರಾಮಾಂತರ ಬಸವ ಜಯಂತಿಯ ಮಹಾಮಣಿಹವನ್ನು ೧೯೭೯ ರಿಂದಲೇ ಶ್ರೀಗಳವರು ನಡೆಸಿಕೊಂಡು ಬಂದಿರುವುದು ತುಂಬಾ ಶ್ಲಾಘನೀಯ. ಅವರೀಗಾಗಲೇ ನಾಡು ಹೊರ ನಾಡುಗಳಲ್ಲಿ ಅಂದರೆ ಮಹಾರಾಷ್ಟ್ರ-ಆಂಧ್ರ, ತಮಿಳುನಾಡುಗಳಲ್ಲಿ ಬಸವತತ್ತ್ವಗಳನ್ನು ಮತ್ತು ಬಸವಣ್ಣನವರ, ಅಕ್ಕಮಹಾದೇವಿ, ಸಿದ್ಧರಾಮೇಶ್ವರರ ಮುಂತಾದ ಶಿವಶರಣರನ್ನು ನಾಟಕಗಳ ಮೂಲಕ ಪ್ರಚಾರ ಮಾಡುತ್ತಿದ್ದು, ಈಗ ೯೫೬ ಗ್ರಾಮಗಳನ್ನು ಸಂಚರಿಸಿದ್ದಾರೆ. ನಾಟಕದ ಮೂಲಕ ಬಸವತತ್ತ್ವಗಳಲ್ಲಿ ಬಸವಣ್ಣನವರು ಆಚರಿಸಿ ತೋರಿಸಿದ ಕಾಯಕ ಮತ್ತು ದಾಸೋಹ ತತ್ತ್ವಗಳೇ ಸಮರ್ಥ ಮತ್ತು ಪರಿಹಾರ ಒದಗಿಸಬಲ್ಲವು ಎಂಬುದನ್ನು ಸ್ವತಃ ಶ್ರೀಗಳವರೇ ನಿರ್ದೇಶನ ಮಾಡಿ ನಾಟಕ ಕಲಾ ತಂಡವನ್ನು ಕಟ್ಟಿ ಅವರಿಂದ ಪ್ರಯೋಗಕ್ಕೆ ತಂದದ್ದು ಸ್ತುತಿಸುವಂತಹದ್ದು.

ನಿಜಾರ್ಥದಲ್ಲಿ ನಡೆದಾಡುವ ದೇವರಾಗಿರುವ ಸಿದ್ಧಗಂಗಾ ಶ್ರೀಗಳು ಪಾದವಿಟ್ಟ ಕ್ಷೇತ್ರವು ಮತ್ತಷ್ಟು ಪಾವನ ಮತ್ತು ಸುಕ್ಷೇತ್ರವಾಗಿ ಭಕ್ತರ ಕಾಮನೆಗಳ ಪೂರೈಕೆಯ ತಾಣವಾಗಿದೆ. (ಬನಾರಸ್) ಕಾಶೀ ವಿಶ್ವನಾಥನ ದರ್ಶನವನ್ನು ಮಾಡಿಕೊಂಡ ನನಗೆ ಇದುವೇ ಮಿಗಿಲಾದ ನಿಜದ ಭೂಕೈಲಾಸದಂತಿರುವ 'ಸಿದ್ಧಗಂಗೆಯೇ ಕಾಶಿ ಕ್ಷೇತ್ರ'ವೆನಿಸಿ ಮನಕ್ಕೆ ಮುದ ನೀಡಿತೆನಗೆ. ಇಂಥ ಅಪರೂಪದ ಪುಣ್ಯಪುರುಷರ ಸಾಲಿನಲ್ಲಿ ಬಿಜಾಪುರದ ಜ್ಞಾನಯೋಗಾಶ್ರಮದ ಸದ್ಗುರು ಪ.ಪೂ. ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳೊಬ್ಬರು. ಇವರಿಬ್ಬರೂ ಪ್ರಪಂಚ ಕಂಡ ಅತ್ಯದ್ಭುತ ಜಂಗಮದ್ವಯ ರೆಂಬುದು ನನ್ನ ಭಾವನೆ.

ನಾನು ಒಂದೇ ದಿನವಿದ್ದ ಕಾರಣ ಸಿದ್ಧಗಂಗೆಯ ದರ್ಶನ ಮಾಡಿಕೊಳ್ಳುವುದಾಗಲಿಲ್ಲ. ಸಿದ್ಧಗಂಗಾ ಮಾಸಪತ್ರಿಕೆಯ ಮೂಲಕವೇ ನನಗೆ ಸುಕ್ಷೇತ್ರದ ಪರಿಚಯವಾದದ್ದು. ನನ್ನ ವೈಯಕ್ತಿಕ ಕಾರ್ಯ ಬಾಹುಳ್ಯದಲ್ಲಿ ಪದೇ ಪದೇ ಹೋಗ ಬೇಕೆಂದರೆ ಹಾರೋಗೇರಿಯಿಂದ ೬೦೦ ಕಿ.ಮೀ. ದೂರ ಬೇರೆ. ಕಾರಣ ಪತ್ರಿಕೆಯಲ್ಲಿಯೇ ಎಲ್ಲವನ್ನೂ ಕಾಣುತ್ತೇನೆ. ಮಹಾಶಿವರಾತ್ರಿಯಲ್ಲಿ ನಡೆಯುವ ಸಿದ್ಧಲಿಂಗೇಶ್ವರ ಸ್ವಾಮಿಯ ಜಾತ್ರೆಯಂಗವಾಗಿ ೧೯೬೪ರಿಂದ 'ಸಿದ್ಧಗಂಗಾ' ಪತ್ರಿಕೆಯು ಪ್ರಾರಂಭವಾಗಿದೆ. ಅದರಲ್ಲಿ ನಾನು ಕಳೆದ ವರ್ಷದಿಂದಲೂ ಲೇಖನ ಕಳಿಸುತ್ತಲಿರುವೆ. ಕರುಣೆ ನೀಡಿದ ಶ್ರೀಗಳವರ ಕರಕಮಲಸಂಜಾತರಾದ ಪರಮಪೂಜ್ಯ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳು ಪ್ರಕಟಿಸಿ ನನ್ನಂಥಹವನಿಗೆ ಪ್ರೋತ್ಸಾಹ ಮತ್ತು ಆಶೀರ್ವಾದ ನೀಡುತ್ತಲಿರುವರು. ಶ್ರೀಮಠದ ಮುಖವಾಣಿಯಾದ ಈ 'ಸಿದ್ಧಗಂಗಾ' ಮಾಸಪತ್ರಿಕೆಯು ಜನರಲ್ಲಿ ಅರಿವಿನ ಜ್ಯೋತಿಯಾಗಿ ಬೆಳಗಲು ಸಹಕಾರಿಯಾಗಿದೆ. ಇಲ್ಲಿಯವರೆಗೆ ಹೇಳಿದಂತೆ ಜಗಜ್ಯೋತಿ ಬಸವಣ್ಣನವರ ಸಿದ್ಧಾಂತಗಳನ್ನು, ಆದರ್ಶಗಳನ್ನು ಶ್ರೀಮಠದಲ್ಲಿ ಸಾಕಾರಗೊಳಿಸಿರುವ ಶ್ರೀಗಳವರು ನಾವೇನೂ ಕಂಡರಿಯದ ೧೨ನೆಯ ಶತಮಾನದಲ್ಲಿ ಕಲ್ಯಾಣದಲ್ಲಿ ನಡೆದ ಸಾಮಾಜಿಕ, ಧಾರ್ಮಿಕ ಕ್ರಾಂತಿ ಹಾಗೂ ಕಾಯಕ ದಾಸೋಹ ವೈಭವವನ್ನು ಮತ್ತೆ ನೋಡುವ ಸೌಭಾಗ್ಯವನ್ನು ಕರುಣಿಸಿದ ದಿವ್ಯಚೇತನ ಇವರು. 'ಮಾನವ ಕುಲವೊಂದೇ ವಲಂ' ಎಂಬ ಪಂಪ ಮಹಾಕವಿಯ ಮಾತಿಗೆ ತಕ್ಕಂತೆ - ಸರ್ವಧರ್ಮ ಸಮನ್ವಯಕ್ಕೆ ಜೀವಂತ ಸಾಕ್ಷಿಯಾಗಿರುವ ಶ್ರೀಕ್ಷೇತ್ರದಲ್ಲಿ ವಿವಿಧ ಜಾತಿ, ಲಿಂಗ, ವರ್ಣ, ವರ್ಗಗಳಿಗೆ ಸೇರಿದ ೧೦,೦೦೦ಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಉಚಿತ ವ್ಯಾಸಂಗದ ಆಶ್ರಯ ನೀಡಿದ್ದಾರೆ. ಇಲ್ಲಿರುವ ವಿದ್ಯಾರ್ಥಿಗಳು ಬಡವರಷ್ಟೇ ಅಲ್ಲದೆ ಅನಾಥ ಮಕ್ಕಳೂ ಇದ್ದಾರೆ. ಪೂರ್ವ ಪ್ರಾಥಮಿಕ ಶಾಲೆಯಿಂದ ಸ್ನಾತಕೋತ್ತರ ತರಗತಿಯವರೆಗೂ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ಸಂಜೆ-ಮುಂಜಾವುಗಳಲ್ಲಿ ಮಾಡುವ







ಸಾಮೂಹಿಕ ಪ್ರಾರ್ಥನೆ ಪೂಜ್ಯ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿಯೇ ನಡೆಯುತ್ತಿರುವುದನ್ನು ವೀಕ್ಷಿಸಿದೆ. ಈ ಸಾಮೂಹಿಕ ಪ್ರಾರ್ಥನಾ ದೃಶ್ಯವನ್ನು ನೋಡಲು ಕಣ್ಣುಗಳು ಪುಣ್ಯ ಮಾಡಿರಬೇಕೆನ್ನುತ್ತಾರೆ ಬಲ್ಲವರು, ವಿಚಾರವಂತರು.

"ಇದುವೇ ನಿಜವಾಗಿಯೂ ಧರ್ಮಕ್ರಾಂತಿಯ ದಿವ್ಯಕ್ಷೇತ್ರವೆನಿಸಿಕೊಂಡಿದೆ. ಇಲ್ಲಿರುವ ಮಕ್ಕಳು ಒಂದು ಜಾತಿಯವರಿಲ್ಲ. ಒಂದು ಕೋಮಿನವರಿಲ್ಲ. ಎಲ್ಲ ಜಾತಿಯವರೂ ಇದ್ದಾರೆ. ನಮ್ಮಲ್ಲಿ ಯಾವ ಯಾವ ಜಾತಿಗಳಿವೆಯೇ ಅವರೆಲ್ಲರೂ ಇದ್ದಾರೆ. ಇಂಥ ದೃಶ್ಯವನ್ನು ನಾನೆಲ್ಲಿಯೂ ನೋಡಿಯೇ ಇಲ್ಲ. ಪರಮಪೂಜ್ಯ ಡಾ॥ ಶ್ರೀ ಶಿವಕುಮಾರ ಶ್ರೀಗಳವರು ನಮ್ಮ ರಾಷ್ಟ್ರಕ್ಕೆ ದಾರಿದೀಪವಾಗಿ, ಜಾತೀಯತೆ ತೊಲಗಿಸಿ ಎಲ್ಲರೂ ಒಂದಾಗಬೇಕೆಂದು ಕಾರ್ಯರೂಪಕ್ಕೆ ತಂದಿದ್ದೀರಿ ಮತ್ತು ಪಾಠ ಕಲಿಸಿದ್ದೀರಿ. ಅದು ಎಲ್ಲ ಮಠಗಳಲ್ಲಿ ಹರಡಲಿ, ಜನ ಒಂದಾಗಲಿ, ಒಂದು ರಾಷ್ಟ್ರವಾಗಲಿ, ಒಗ್ಗಟ್ಟಿನಿಂದ ಕೆಲಸ ಮಾಡತಕ್ಕಂತಹ ಒಂದು ರಾಷ್ಟ್ರವಾಗಲಿ ಎನ್ನುವುದನ್ನು ತಾವು ತೋರಿಸಿಕೊಟ್ಟಿದ್ದೀರಿ" ಎಂದು ಹೇಳಿದ ರಾಷ್ಟ್ರನಾಯಕ ಎಸ್. ನಿಜಲಿಂಗಪ್ಪನವರ ಮಾತು ನಿತ್ಯಸತ್ಯ.

ಇಂಥ ಪುಣ್ಯಪರಂಪರೆಯನ್ನು ಹೊಂದಿದ ಸುಕ್ಷೇತ್ರ ಸಿದ್ಧಗಂಗಾ ಮಠವು ಇಡೀ ವಿಶ್ವಕ್ಕೇ ಮಾದರಿಯಾಗಿದೆ. ಶ್ರೀಮಠದ ಸಂಸ್ಥಾಪಕರು ಶೂನ್ಯಸಿಂಹಾಸನ ಪರಂಪರೆಯ ಗೋಸಲ ಸಿದ್ಧೇಶ್ವರರಿಂದಾಗಿದೆ. ೧೪ನೆಯ ಶತಮಾನದಲ್ಲಿ ಆರಂಭವಾದ ಈ ಕ್ಷೇತ್ರದ ಚಟುವಟಿಕೆಗಳು ಪ್ರಸಿದ್ಧಿಗೆ ಬಂದುದು- ತೋಂಟದ ಸಿದ್ಧಲಿಂಗೇಶ್ವರರ ಕಾಲದಲ್ಲಿ. ಸಿದ್ಧಗಂಗಾ ಕ್ಷೇತ್ರಕ್ಕೆ ಭಕ್ತಿಯ ಭಸ್ಮಲೇಪಿಸಿ ಅನ್ನದಾಸೋಹಕ್ಕೆ ಚಾಲನೆ ನೀಡಿದವರು ಪರಮಪೂಜ್ಯ ಶ್ರೀ ಅಟವೀ ಮಹಾಸ್ವಾಮಿಗಳು. ಸಿದ್ಧಿಯ ಪುಷ್ಪ ಮುಡಿಸಿದವರು ಶ್ರೀ ಉದ್ಧಾನ ಶಿವಯೋಗಿಗಳು. ತುಮಕೂರು ಸಿದ್ಧಗಂಗಾ ಕ್ಷೇತ್ರದ ಹಿರಿಮೆ-ಗರಿಮೆಯ ಕೀರ್ತಿಯನ್ನು ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಮಟ್ಟಕ್ಕೇರಿಸಿದವರು ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಶ್ರೀ ಉದ್ಧಾನ ಶಿವಯೋಗಿಗಳವರ ಶುದ್ಧವಾದ (ನಿಷ್ಕಲ್ಮಶ) ಸಂಕಲ್ಪಕ್ಕೆ ಅನುಗುಣವಾಗಿ ಸಿದ್ಧಗಂಗಾ ಕ್ಷೇತ್ರವನ್ನು ಅನ್ನ ಮತ್ತು ಭಕ್ತಿ, ಜ್ಞಾನ ಕ್ರಿಯೆಗಳ ಮಹಾಮನೆಯನ್ನಾಗಿ ರೂಪಿಸಿದ ವಿಶ್ವವಿಭೂತಿ ಚೇತನ ಪೂಜ್ಯ ಶ್ರೀಗಳವರದಾಗಿದೆ. ವಿಶ್ವವೇ ಕಂಡ ಚಿಂತಾಮಣಿ, ಪುರುಷಮಣಿ, ಸರ್ವಜ್ಞ, ಸ್ವಾಮಿಕುಲಕಲಶ, ಬಸವಣ್ಣನವರ ಪ್ರತಿರೂಪ, ಸಾಧು ಚಕ್ರವರ್ತಿ, ಯತಿವರೇಣ್ಯ, ದಾರ್ಶನಿಕರ ಕಣ್ಮಣಿ, ಕಾಯಕ-ದಾಸೋಹಗಳ ಸತ್ಯಾರಾಧಕ, ಅವಿರಳ ರಾಷ್ಟ್ರಚಿಂತಕ, ಮಾನವೀಯತೆಯ ಸಾಕಾರ ಮೂರ್ತಿಗೆ ಸಮಸ್ತ ಭಕ್ತಸ್ತೋಮದ ಗುರುವಂದನಾ ನಮನಗಳು.

ವಿಸ್ಮಯ ಜಗತ್ತಿನಲ್ಲಿ ಕಂಡ ವಿಸ್ಮಯಗಳನ್ನು ನೆನಪಿಸುತ್ತಲಿದ್ದ ಪರಮಪೂಜ್ಯರು ಅದೆಷ್ಟು ತೀಕ್ಷ್ಣ-ಸೂಕ್ಷ್ಮಮತಿಗಳೆಂದರೆ ಕಣ್ಣು ಸ್ಪಷ್ಟ, ಕಿವಿ ಸೂಕ್ಷ್ಮ, ಬೆನ್ನು ಬಾಗಿದ್ದರೂ ಆಸರೆಗೊಂದು ಕೋಲು ಹಿಡಿಯಲಾರರು. ೧೦೩ರ ಗಡಿ ದಾಟಿದರೂ ಹರೆಯದ ಹುಡುಗರಂತೆ ದಿನನಿತ್ಯವೂ ಶ್ರೀಮಠದಲ್ಲಿರುವ ಪ್ರತಿ ಗದ್ದುಗೆಗಳಿಗೆ, ಭೋಜನಾಲಯಕ್ಕೆ ಶಾಲಾ, ಕಾಲೇಜುಗಳಿಗೆ, ಪ್ರಾರ್ಥನಾ ಮಂದಿರಗಳಿಗೆ, ಕಛೇರಿಗೆ, ಬ್ಯಾಂಕು-ಮತ್ತಿತರ ಆಡಳಿತಾತ್ಮಕ ಚಟುವಟಿಕೆಗಳಲ್ಲಿ ಸ್ವತಃ ಭಾಗಿಯಾಗುತ್ತಾರೆ. ಬಂದ ಪತ್ರಗಳಿಗೆ ಉತ್ತರವನ್ನು ಸ್ವತಃ ಪೂಜ್ಯರೇ ಮಾಡುತ್ತಾರೆಂದರೆ ಸೋಜಿಗವಲ್ಲವೆ? ಅಲ್ಲದೆ ಶ್ರೀಗಳವರ ಆಧ್ಯಾತ್ಮ ಸಾಧನೆ ಶಕ್ತಿಯಿಂದಾಗಿ ಶ್ರೀಮಠವೆಲ್ಲವೂ ಕ್ರಿಯಾಶೀಲವಾಗಿದೆ. ಯಾವಾಗಲೂ ಜಾಗೃತಾವಸ್ಥೆಯಲ್ಲಿರುವಂತಾಗಿದೆ. ಪೂಜ್ಯರು ದಿನದಲ್ಲಿ ಕೇವಲ ನಾಲ್ಕು ಗಂಟೆಗಳ ಕಾಲ ನಿದ್ರಿಸುತ್ತಾರೆ. ಉಳಿದೆಲ್ಲ ಅವಧಿ ಶ್ರೀಮಠದ ಪ್ರಗತಿಗಾಗಿ ಮೀಸಲು. ಇಂತಿವರ ಸದ್ಭಾವ ಮತ್ತು ದಿನಚರಿ ಸತ್ಕಾರ್ಯಗಳಿಂದಲೇ ಮುಂದುವರೆಯುತ್ತಿದ್ದು ಇವೆಲ್ಲವೂ ಮಾನವ ಜನಾಂಗದ ಏಳಿಗೆಗಾಗಿಯೇ ಎಂಬುದನ್ನು ಮರೆಯುವಂತಿಲ್ಲ. ನಿತ್ಯವೂ ಹೇಳುವ ಮಾತುಗಳೆಂದರೆ 'ನಾಳೆ ಬಪ್ಪುದು ನಮಗಿಂದೇ ಬರಲಿ, ಇಂದು ಬಪ್ಪುದು ನಮಗೀಗಲೇ ಬರಲಿ' ಎಂಬಂತೆ ಎಷ್ಟೇ ದೈಹಿಕ ಆಯಾಸವಾಗಿರಲಿ, ನಿದ್ರೆಗೆಟ್ಟಿರಲಿ. ಅಂದಂದಿನ ಕೆಲಸಗಳನ್ನು ಅಂದೇ ಮುಗಿಸುವ ಕಾಯಕ ನಿಷ್ಠೆಯುಳ್ಳವರು. ಲೋಕವೇ ನನ್ನ ಮನೆ. ಈ ಮನೆಯಲ್ಲಿರುವ ಬಂಧುಗಳೇ ನನ್ನವರು ಎಂದು ಹಚ್ಚಿಕೊಂಡು, ಲೋಕ ಜೀವನದ ಸೌಂದರ್ಯಕ್ಕೆ, ಉತ್ಕರ್ಷಕ್ಕೆ ಅವಿಶ್ರಾಂತವಾಗಿ ಶ್ರಮಿಸಿದ್ದಾರೆ. ಪೂಜಾದಿ ತಪೋ ಕಾರ್ಯವನ್ನು ನಿರಂತರವಾಗಿ ಆಚರಿಸುತ್ತ ಬಂದಿದ್ದರು. 'ಯಶಸ್ವೀ ಬದುಕಿಗೆ ಆಚಾರವೇ ಮೂಲ' ಎಂಬುದು ಅವರ ದಿವ್ಯಮಂತ್ರ. ಆಡಂಬರ ಜೀವನಕ್ಕೂ ಶ್ರೀಗಳವರಿಗೂ ಬಹುದೂರ. ಇವರು ಧೈರ್ಯಶಾಲಿಗಳು, ಕ್ಷಮಾಶೀಲರು, ಅವಿಕಾರ ಚೇತನರು, ಲೋಕೋದ್ಧಾರ







ಕ್ಕಾಗಿ ಶಿಕ್ಷಣ ಸಂಸ್ಥೆಗಳನ್ನು ತೆರೆದು ಸಹಸ್ರಾರು ಬಡ ಮಕ್ಕಳ, ಅನಾಥ ಮಕ್ಕಳ ಏಳಿಗೆಗೆ ಕಾರಣಪುರುಷರಾಗಿದ್ದಾರೆ. ಶ್ರೀಗಳವರ ಅಂತಃಕರಣ ಬಹು ಮೇಲ್ಮಟ್ಟದ್ದಾಗಿದೆ.

ಶ್ರೀಗಳವರು ನಿರಂತರವಾಗಿ ೧೯೩೦ರಲ್ಲಿ ಸಿದ್ಧಗಂಗಾ ಮಠದ ಪಟ್ಟಾಧಿಕಾರಿಗಳಾಗಿದ್ದುಕೊಂಡು ಇಲ್ಲಿಯ ತನಕವೂ ಹಗಲಿರುಳೆನ್ನದೇ ಶ್ರಮಿಸುತ್ತ ಬಂದಿರುವರು. ೮೮ ವರ್ಷಗಳ ಸೇವೆಯಿಂದಾಗಿ ಶ್ರೀಮಠವು ಭೌತಿಕವಲ್ಲದೇ ನೈತಿಕ ಶಕ್ತಿಯ ಸ್ಫೂರ್ತಿ ಇಲ್ಲಿನ ತಾಯಿ ಬೇರಾಗಿದೆ. ಸಿದ್ಧಗಂಗಾ ಮಠದಲ್ಲಿ ಶಿಕ್ಷಣ ಪಡೆದಾತ ಸುಸಂಸ್ಕೃತ ವ್ಯಕ್ತಿಯಾಗಿ ಹೊರಬರುತ್ತಿರುವುದು ಕರ್ನಾಟಕದ ಸುದೈವ. ಇದಕ್ಕೆ ರಾಷ್ಟ್ರಕವಿ ಡಾ|| ಜಿ.ಎಸ್. ಶಿವರುದ್ರಪ್ಪನವರೇ ನಿದರ್ಶನ. ಶ್ರೀಮಠದಲ್ಲಿ ಕಲಿತು ಹೊರಬಂದವರು ತನ್ನ ವ್ಯಕ್ತಿತ್ವದ ಮೂಲಕ ಉನ್ನತ ಯಶಸ್ಸು ಮತ್ತು ಉತ್ತಮ ಸಾಂಸ್ಕೃತಿಕ ಮೌಲ್ಯಗಳೊಂದಿಗೆ ಹೊರಬರುತ್ತಾರಲ್ಲದೆ ಸಮಾಜಕ್ಕೆ ಉಪಕಾರಿಯಾಗಿ ಬಾಳುತ್ತಾರೆ. ಈ ರೀತಿಯಾಗಿ 'ಶ್ರೀಮಠವು' ತನ್ನ ಸೇವಾಕೈಂಕರ್ಯಗಳ ಮೂಲಕ ಜನಮನದಲ್ಲಿ ನೈತಿಕ ಜೀವನ ಪ್ರಾಮುಖ್ಯತೆಯನ್ನು ಆಚರಿಸಿ ತೋರಿಸುತ್ತಿರುವುದು ಇತಿಹಾಸಕ್ಕೆ ನಿದರ್ಶನವಾಗಿದೆ' ಎಂದು ಮಾಜಿ ಪ್ರಧಾನಿ ಶ್ರೀ ಅಟಲ್ ಬಿಹಾರಿ ವಾಜಪೇಯಿಯವರು ಹೇಳಿದ ಮಾತು ತುಂಬಾ ಅರ್ಥಪೂರ್ಣವಾಗಿದೆ.

ಶ್ರೀಮಠದ ಇತಿಹಾಸವು ಬೆಳಕಿನ ಯುಗ ನಿರ್ಮಾಣ ಮಾಡುವ ಕೈಂಕರ್ಯದಲ್ಲಿ ವೀರ ವೈರಾಗ್ಯ ಸಂಪನ್ನಶೀಲ ಶಿವಯೋಗಿಗಳನ್ನು ಪಡೆದಿದೆ. ಬಡವ-ಬಲ್ಲಿದರಾದಿಯಾಗಿ ಸಮಸ್ತ ಜನ ಸಮೂಹದ ಭಕ್ತಿಯ ತಾಣವಾಗಿದೆ. ಒಂದು ಪುಟ್ಟ ಭಾರತವನ್ನು ಪ್ರತಿನಿಧಿಸುವಂತಹ ಶ್ರೀಮಠ ಭಾರತೀಯ ಸಂಸ್ಕೃತಿಯ ಸಾಕಾರ ಕೇಂದ್ರವಾಗಿದೆ. ಬಸವಣ್ಣನವರು ಹೇಳಿರುವ ಸಕಲ ಜೀವಾತ್ಮರಿಗೆ ಲೇಸು ಬಯಸುವ ಶರಣ ಸಂದೇಶವನ್ನು ಸಾರ್ಥಕಗೊಳಿಸಿದೆ. ಆದುದರಿಂದ ನಾವು ನೀವೆಲ್ಲರು ಶ್ರೀ ಸಿದ್ಧಗಂಗೆಯ ಶ್ರೀಮಠದ ಸಿದ್ಧಪುರುಷರ ದರ್ಶನ ಪಡೆದು ಪುನೀತರಾಗೋಣ. ■

ಶ್ರೀವಾಣಿ

## ಜೀವಚೈತನ್ಯ



ಮನುಷ್ಯನೆಂದರೆ ಕೇವಲ ಭೌತಶರೀರವಲ್ಲ, ಆತ್ಮವನ್ನೊಡಗೂಡಿದ ಪವಿತ್ರ ದೇವಾಲಯ. ದೇಹದ ಬೆಳವಣಿಗೆ ಮುಖ್ಯ. ಕೇವಲ ದೇಹ ಬೆಳೆದರೆ ಸಾಲದು; ಆತ್ಮವಿಕಾಸವಾಗಬೇಕು. ಕಾಯವಿಡುದು ಬಂದ ಆತ್ಮ ಬೆಳಕಾಗಬೇಕು. ಆತ್ಮದ ಆಶ್ರಯ ಸ್ಥಾನವಾದ ದೇಹ ಆತ್ಮದ ಬೆಳವಣಿಗೆಗೆ ಸಹಾಯಕವಾಗಬೇಕು. ದೇಹಕ್ಕೆ ಏಳು ಬೀಳುಗಳುಂಟು. ಬಿದ್ದುಹೋಗುವ ಕಾಯ ಕಾಯಸ್ಥವಾದ ಆತ್ಮನ ಅನುಕೂಲಕಾರಿಯಾಗಬೇಕು. ದೇಹ-ಆತ್ಮಗಳ ಸಮನ್ವಯ ಸಾರ್ಥಕ ಜೀವನ. ನಶ್ವರವೆನ್ನಬಹುದಾದೆಲ್ಲ ಅಳಿದು ಚಿರಂತನವಾದುದುಳಿಯಬೇಕಾದರೆ ಇರುವಷ್ಟು ದಿನ ಮಾನವೀಯತೆಯ ಆರಾಧನೆ ನಡೆಯಬೇಕು. ತಾತ್ವಿಕ ಜೀವನದ ಮೂಲಭೂತ ಅಗತ್ಯಗಳಾದ ಅನ್ನ, ಬಟ್ಟೆ, ವಸತಿ ಇತ್ಯಾದಿಗಳನ್ನು ಧರ್ಮಬದ್ಧವಾಗಿ ಸಂಪಾದಿಸುವ ಸಂಕಲ್ಪ ದೊಡ್ಡದು. ಧರ್ಮವೆಂದೂ ಜೀವನಕ್ಕೆ ವಿಮುಖವಾದುದಲ್ಲ. ಜನವಿರೋಧಿಯಾದುದು, ಜೀವವಿರೋಧಿಯಾದುದು ಧರ್ಮವಾಗಲಾರದು. ಮಾನವನ ಹೊರತಾಗಿ ಸೃಷ್ಟಿಯಲ್ಲಿ ಯಾವುದೂ ಧರ್ಮ ಮೀರಿ ನಡೆಯುತ್ತಿಲ್ಲ. ಅಗ್ನಿ ಸುಡುತ್ತಿದೆ, ಗಾಳಿ ಬೀಸುತ್ತಿದೆ, ನೀರು ಹರಿಯುತ್ತಿದೆ, ಗ್ರಹ ಉಪಗ್ರಹಗಳು ಕಿಂಚಿತ್ತೂ ತಪ್ಪದೆ ನಿಯಮನಿಷ್ಠವಾಗಿ ಚಲಿಸುತ್ತಿವೆ, ಹಗಲಿರುಳು ಉರುಳುತ್ತಿವೆ. ಪ್ರಾಣಿ ಪಶು ಪಕ್ಷಿಗಳು ಸ್ವಕರ್ಮಶೀಲವಾಗಿವೆ. ಹೀಗಿರುವಾಗ ಮನುಷ್ಯನೇಕೆ ಅಧರ್ಮಿಯಾಗಬೇಕು? ಪ್ರಕೃತಿ ವಿರುದ್ಧವಾಗಿ ಏಕೆ ನಡೆಯಬೇಕು? ''ಕ್ರಮತಪ್ಪಿ ನಡೆವುದರಿಂದ ಕಷ್ಟಮುಂಟೆ?''. ಕ್ರಮವೇಕೆ ತಪ್ಪಬೇಕು. ಅದಕ್ಕಾಗಿಯೇ ಪ್ರಕೃತಿಯಲ್ಲಿ ಋತು ಸಂಹಿತೆ ಇರುವಂತೆ ಮನುಷ್ಯನಿಗೆ ಆಚಾರ ಸಂಹಿತೆ, ನೀತಿಸಂಹಿತೆಬೇಕು. ವಿಚಾರಶುದ್ಧಿ ಆಚಾರಶುದ್ಧಿಗಳ ಸಮನ್ವಯ ಬರಬೇಕು.







ನೆನಪಿನಂಗಳದಿಂದ

# ಕಾರುಣ್ಯಮೂರ್ತಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು

- ಪಿ.ಎಸ್. ಬಸವಣ್ಣ

"ಬಸ್ ಚಾರ್ಜ್ಗೆ ದುಡ್ಡು ಇರಲಿಲ್ಲ ಬುದ್ಧಿ, ಅಲ್ಲಿಂದ ದುಡ್ಡು ಒಂಚ್ಕೊಂಡು ಬರೋಕೆ ಲೇಟಾಗೋಯ್ತು" ಯಾರೋ ಒಬ್ಬ ಉತ್ತರ ಕರ್ನಾಟಕದ ಮಧ್ಯ ವಯಸ್ಕರು ತಮ್ಮ ಕಷ್ಟವನ್ನು ಹೇಳಿಕೊಳ್ಳುತ್ತಿದ್ದರು. ಅವರೊಡನೆ ಇಬ್ಬರು ಪುಟ್ಟ ಪುಟ್ಟ ಮಕ್ಕಳು ಇದ್ದರು, ಆ ಮಕ್ಕಳನ್ನು ವಿದ್ಯಾಭ್ಯಾಸದ ಸಲುವಾಗಿ ಶ್ರೀಮಠಕ್ಕೆ ಸೇರಿಸಲು ಕರೆತಂದಿದ್ದರು.

ಆದರೆ ಅವರು ಶಾಲೆಗಳು ಶುರುವಾಗಿ ಕೆಲವು ತಿಂಗಳ ನಂತರ ಮಕ್ಕಳನ್ನು ಕರೆತಂದಿದ್ದರು.

"ಸರಿ ಮುಂದಿನ ವರ್ಷ ಕರೆದುಕೊಂಡು ಬನ್ನಿ ಸೇರಿಸಿಕೊಳ್ಳೋಣ" ಸ್ವಾಮೀಜಿಯವರು ಸೂಚಿಸಿದರು.

ಸ್ವಾಮೀಜಿಯವರ ಮಾತುಗಳನ್ನು ಕೇಳಿದ ಆ ಮಧ್ಯವಯಸ್ಕರು "ಬುದ್ಧಿ ಈ ಮಕ್ಕಳನ್ನು ವಾಪಸು ಕರೆದುಕೊಂಡು ಹೋಗಲು ಸಹ ನನ್ನ ಬಳಿ ಬಸ್ ಚಾರ್ಜ್ಗೆ ದುಡ್ಡಿಲ್ಲ. ಈ ಮಕ್ಕಳನ್ನು ಇಲ್ಲೇ ಕ್ಯಾತ್ಸಂದ್ರದ ಇಡ್ಲಿ ಹೋಟೆಲಿನಲ್ಲಿ ಪಾತ್ರೆ ತೊಳೆಯೋಕೆ, ಇಲ್ಲಾ ಹಿಟ್ಟು ರುಬ್ಬಕ್ಕೆ ಬಿಟ್ಟ ಹೋಯ್ತಿನಿ. ಮುಂದಿನ ವರ್ಷ ತಮ್ಮಲ್ಲಿಗೆ ವಿದ್ಯಾಭ್ಯಾಸಕ್ಕೆ ಸೇರಿಕೊಳ್ಳಲಿ" ಎಂದು ಅವರು ತಮ್ಮ ಅಸಹಾಯಕತೆಯನ್ನು ತೋಡಿಕೊಂಡರು.

ಸ್ವಾಮೀಜಿಯವರು ಒಂದು ನಿಮಿಷ ಚಿಂತ್ರಾಕ್ರಾಂತರಾದರು. ಅವರ ಮುಖದಲ್ಲಿ ಅತ್ಯಂತ ನೋವಿನ ಗೆರೆಗಳು ಕಾಣಿಸಿದವು, ಪಕ್ಕಕ್ಕೆ ತಿರುಗಿ ಅಲ್ಲಿದ್ದವರಿಗೆ ಏನನ್ನೋ ಸೂಚಿಸಿದರು, ಮುಂದಿನದನ್ನು ಹೇಳಲೇಬೇಕಾಗಿಲ್ಲ. ಆ ಇಬ್ಬರು ಮಕ್ಕಳಿಗೆ ತತ್ಕ್ಷಣ ಶ್ರೀಮಠದಲ್ಲಿ ಪ್ರವೇಶ ದೊರಕಿತು.

ಆ ಮಧ್ಯವಯಸ್ಕರಿಗೆ ದೇವರಿಂದ ವರವನ್ನು ಪಡೆದಷ್ಟು ಸಮಾಧಾನ ಕಾಣಿಸಿತು. ಅಲ್ಲಿಯೇ ನಿಂತಿದ್ದ ನನಗೆ ಆ ಮಧ್ಯವಯಸ್ಕರು ದೇವರನ್ನೇ ಹೆದರಿಸಿ ತಮ್ಮ ಕೆಲಸ ಮಾಡಿಸಿಕೊಂಡ ಅತಿಮಾನುಷರಂತೆ ಕಾಣಿಸಿದರು. ಹೌದು ಪೂಜ್ಯ ಶ್ರೀಗಳವರ ಬಲಹೀನತೆ ಮಕ್ಕಳು,,,!! ಆ ಮಕ್ಕಳಿಗಾಗಿ ಅವರು ತ್ರಿವಿಧ ದಾಸೋಹಗಳನ್ನು ಮಾಡಲು ತಮ್ಮ ಜೀವನವನ್ನು ಮುಡುಪಾಗಿಟ್ಟವರು, ಅಂದಿನ ಸಿದ್ಧಗಂಗಾ ಮಠಾಧೀಶರಾದ ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು.

ಸಿದ್ಧಗಂಗಾಮಠ ಕನ್ನಡ ನಾಡಿನ ಪ್ರಸಿದ್ಧವಾದ ಮಠವಾಗಿದ್ದು ಅಲ್ಲಿ ಯಾವುದೇ ಜಾತಿ ಮತಗಳ ಬೇಧವಿಲ್ಲದೆ ಎಲ್ಲಾ ಜನಾಂಗದ ಮಕ್ಕಳಿಗೆ ಜ್ಞಾನ, ವಿದ್ಯೆ ಮತ್ತು ಅನ್ನ ದಾಸೋಹಗಳನ್ನು ಮಠದ ಹಿರಿಯ ಶ್ರೀಗಳಾದ ಪದ್ಮಭೂಷಣ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಸುಮಾರು ಒಂಭತ್ತು ದಶಕಗಳಿಂದ ನಡೆಸಿಕೊಂಡು ಬಂದಿದ್ದರು.

ಶ್ರೀ ಉದ್ದಾನ ಶಿವಯೋಗಿಗಳಿಂದ ದೀಕ್ಷೆಯನ್ನು ಪಡೆದು ಮಠದ ಜವಾಬ್ದಾರಿಯನ್ನು ವಹಿಸಿಕೊಂಡಾಗ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳಿಗೆ ಇನ್ನೂ ಇಪ್ಪತ್ತುಮೂರರ ವಯಸ್ಸು. ಆಗ ಮಠದಲ್ಲಿದ್ದ ಕೆಲವು ವಿದ್ಯಾರ್ಥಿಗಳು, ಖಾಲಿ ಜೋಳಿಗೆ ಮತ್ತು ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ಸೇವೆಯನ್ನು ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳಿಗೆ ಹಸ್ತಾಂತರಿಸಿ, ಶ್ರೀ ಶ್ರೀ ಉದ್ದಾನ ಶಿವಯೋಗಿ ಸ್ವಾಮಿಗಳು ಶಿವೈಕ್ಯರಾದರು.

ಶ್ರೀ ಉದ್ದಾನ ಶಿವಯೋಗಿ ಗದ್ದುಗೆ ಸೇರಿದ ನಂತರ ತಲೆಯ ಮೇಲೆ ಕೈ ಹೊತ್ತು ಕೂರದೆ ತಮ್ಮ ಹೆಗಲ ಮೇಲಿನ ಜೋಳಿಗೆಯೊಂದಿಗೆ ಕರ್ನಾಟಕದ ಮೂಲೆ ಮೂಲೆಯನ್ನು ಸುತ್ತಿದರು.







ಶ್ರೀ ಸಿದ್ದಲಿಂಗೇಶ್ವರ ಸ್ವಾಮಿಯ ಕೃಪೆ, ಶ್ರೀ ಶ್ರೀ ಉದ್ದಾನ ಶಿವಯೋಗಿಗಳ ಆಶೀರ್ವಾದ, ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಪರಿಶ್ರಮ ಎಲ್ಲವೂ ಸೇರಿ ಸಣ್ಣದಾಗಿ ಝುರಿಯಂತೆ ಹರಿದು ಬಂದು ಖಾಲಿ ಜೋಳಿಗೆ ತುಂಬಲು ಆರಂಭವಾಗಿ ಪ್ರವಾಹೋಪಾದಿಯಲ್ಲಿ ಬಂದು ಸಾಗರದಂತೆ ಬೃಹದಾಕಾರವಾಗಿ ಬೆಳೆದು ನಿಂತಿತು ಶ್ರೀಮಠ.

ಶ್ರೀ ಮಠವು ಬೆಳೆದಂತೆ ಶ್ರೀ ಶಿವಕುಮಾರ ಸ್ವಾಮಿಗಳಿಗೆ ಶ್ರೀ ಮಠದ ಆಡಳಿತದ ಕಾರ್ಯದೊತ್ತಡ, ಪೂಜಾ ಸೇವೆಗಳು, ಹೀಗೆ ಹತ್ತಾರು ಕೆಲಸ ಕಾರ್ಯಗಳಿಂದಾಗಿ ದಿನದಲ್ಲಿ ಕಡಿಮೆ ಎಂದರೂ ಇಪ್ಪತ್ತು ಗಂಟೆ ಕೆಲಸ ಮಾಡುತ್ತಿದ್ದರು.

ಮಠವು ಸದೃಡವಾದಂತೆ ಮಠದ ಮೇಲೆ ಅವಲಂಬಿತವಾದ ವಿದ್ಯಾರ್ಥಿಗಳ ಸಂಖ್ಯೆಯು ಸಹ ಏರಿತು. ವಿದ್ಯಾರ್ಥಿಗಳ ಸಂಖ್ಯೆಗೆ ಅನುಗುಣವಾಗಿ ಶಾಲಾ ಕಾಲೇಜುಗಳು, ಶಾಲಾ ಕಾಲೇಜುಗಳಿಗೆ ಶಿಕ್ಷಕರು, ವಿದ್ಯಾರ್ಥಿ ನಿಲಯಗಳು, ಜೊತೆಗೆ ಪ್ರತಿದಿನ ಸುಮಾರು ಹತ್ತುಸಾವಿರ ಮಕ್ಕಳಿಗೆ ಬೇಕಾದ ಅಡುಗೆ ಎಲ್ಲವನ್ನು ಶ್ರೀಗಳು ಸುಲಲಿತವಾಗಿ ನಡೆಸಿಕೊಂಡು ಬಂದು ನಾಡಿಗೆ ದಾರಿದೀಪವಾದರು.

ಶ್ರೀ ಮಠದ ಮೇಲ್ಪಂಕ್ತಿಯನ್ನು ಅನುಸರಿಸಿ ಕರ್ನಾಟಕದ ಹಲವು ಮಠ ಮಾನ್ಯಗಳು, ಜೊತೆಗೆ ಕರ್ನಾಟಕ ಸರ್ಕಾರವೂ ಸಹ ವಿದ್ಯಾರ್ಥಿಗಳಿಗೆ ವಿದ್ಯೆಯ ಜೊತೆ ಮಧ್ಯಾಹ್ನ ಸಮಯದ ಊಟವನ್ನು ಸಹ ಉಣಬಡಿಸುವ ಕಾರ್ಯಕ್ರಮವನ್ನು ಜಾರಿಗೆ ತಂದಿತು.

ಸುಮಾರು ಹದಿನೈದು ಇಪ್ಪತ್ತು ವರ್ಷಗಳ ಕೆಳಗೆ ಸಿದ್ಧಗಂಗಾ ಬೆಟ್ಟದ ಮೇಲಿನ ದೇವಸ್ಥಾನದ ಆವರಣದಲ್ಲಿ ದುರಸ್ತಿ ಕಾರ್ಯ ಮತ್ತು ಕಲ್ಲಿನ ಕೆಲಸದ ಪ್ರಗತಿಯನ್ನು ವೀಕ್ಷಿಸಲು ಮಧ್ಯಾಹ್ನ ಸುಮಾರು ಮೂರು ಗಂಟೆ ಸಮಯದ ಹೊತ್ತಿಗೆ ಮಠದ ಎಸ್ಟೇಟ್ ಆಫೀಸರ್ ಪ್ರೊಫೆಸರ್ ಬಿ. ಗಂಗಾಧರಯ್ಯನವರು ಸುಮ್ಮನೆ ನನ್ನನ್ನು ಜತೆಯಲ್ಲಿ ಕರೆದುಕೊಂಡು ಹೋಗಿದ್ದರು. ನಾವುಗಳು ಅಲ್ಲಿ ನಡೆಯುತ್ತಿದ್ದ ಕೆಲಸವನ್ನು ವೀಕ್ಷಿಸುತ್ತಿದ್ದಾಗ ಯಾವುದೇ ಸುಳಿವನ್ನೂ ಕೊಡದೆ ಶ್ರೀಮಠದ ಕಾರು ಬೆಟ್ಟದ ಮೇಲಕ್ಕೆ ಬಂದಿತು. ಕಾರಿನಿಂದ ಇಳಿದ ಶ್ರೀಗಳು ಬಿರಬಿರನೆ ನಡೆದುಕೊಂಡು ಕೆಲಸ ನಡೆಯುತ್ತಿದ್ದ ಜಾಗಕ್ಕೆ ಬಂದು ನಿಂತುಕೊಂಡರು. ಅವರನ್ನು ಕಂಡ ತಕ್ಷಣ ನಾವಿಬ್ಬರೂ ಅವರ ಪಾದಗಳಿಗೆ ನಮಸ್ಕರಿಸಿದ ನಂತರ ಗಂಗಾಧರಯ್ಯನವರು ನಡೆಯುತ್ತಿದ್ದ ಕೆಲಸಗಳ ಬಗ್ಗೆ ಶ್ರೀಗಳವರಿಗೆ ವಿವರಣೆಯನ್ನು ನೀಡಿದರು. ಆ ನಂತರ ನಡೆಯುತ್ತಿದ್ದ ಕೆಲಸವನ್ನು ವೀಕ್ಷಿಸುತ್ತಾ ಪೂಜ್ಯರು ಸುಮಾರು ಒಂದು ಗಂಟೆಗಳ ಕಾಲ ಅಲ್ಲಿಯೇ ನಿಂತುಕೊಂಡಿದ್ದರು. ಪೂಜ್ಯರು ಅಲ್ಲಿ ನಿಂತಿದ್ದಾಗ ನಾವು ಅಲ್ಲಿಂದ ಕದಲಲು ಸಾಧ್ಯವಿರಲಿಲ್ಲ ಒಂದೇ ಜಾಗದಲ್ಲಿ ನಿಂತುಕೊಂಡಿದ್ದರಿಂದ ನನಗೆ ಕಾಲು ನೋವು ಶುರುವಾಯಿತು. ಆದರೆ ನಿಂತ ಜಾಗದಲ್ಲಿ ಅಲ್ಲಾಡದೆ ನಿಂತುಕೊಂಡು ಕೆಲಸವನ್ನು ವೀಕ್ಷಿಸುತ್ತಿದ್ದ ಪೂಜ್ಯರ ಮುಖದಲ್ಲಿ ಯಾವುದೇ ಆಯಾಸ, ನೋವು ಕಂಡುಬರಲಿಲ್ಲ. ಆಗ ದೇವರಿಗೆ ಸುಮಾರು ಎಂಬತ್ತೈದು ವರ್ಷ ವಯಸ್ಸಾಗಿತ್ತು. ■

## ಶ್ರೀವಾಣಿ

ಮನುಷ್ಯ ಶ್ರಮಜೀವಿಯಾಗಬೇಕು. ಕಾಯಕ ಮಾಡುವಂತವನಾಗಬೇಕು. ವೃಥಾ ಕಾಲಹಾನಿ ಮಾಡಬಾರದು. ಫಲ ಬೇಕಾದರೆ ಕಾಯಕ ಮಾಡಿ ಫಲವನ್ನು ಸ್ವೀಕಾರ ಮಾಡಬೇಕು. ಮನುಷ್ಯ ಕಾಯಕ ಜೀವಿಯಾಗಿ ತತ್ತ್ವ ನಿಷ್ಠನಾಗಿ ತನ್ನ ಕರ್ತವ್ಯ ಚೆನ್ನಾಗಿ ಮಾಡಬೇಕು. ಆಗ ತಾನಾಗಿಯೇ ಫಲ ದೊರೆಯುತ್ತದೆ.

* * *

ರಾಷ್ಟ್ರ ಮುಂದುವರಿಯಬೇಕಾದರೆ ಜನರು ಕ್ರಿಯಾಶೀಲರಾಗಿ, ಕಷ್ಟಪಟ್ಟು ಕೆಲಸ ಮಾಡಬೇಕು. ದುಡಿಮೆಗೆ ಮಹತ್ತರವಾದ ಸ್ಥಾನ ಉಂಟು. ಸ್ವಾತಂತ್ರ್ಯ ಬಂದ ಮೇಲೆ ಉಂಟಾಗಿರತಕ್ಕಂತಹ ಒಂದು ತಪ್ಪು ಕಲ್ಪನೆ ಎಂದರೆ ಕಷ್ಟಪಡದೆ ಆರಾಮ ಜೀವನ. ಸುಖವಾಗಿರಬೇಕೆಂಬ ಆಕಾಂಕ್ಷೆವುಳ್ಳವರ ಸಂಖ್ಯೆ ಹೆಚ್ಚಾಗಿದೆ. ಸರ್ಕಾರವೇ ತಾನಾಗಿಯೇ ಎಲ್ಲವನ್ನು ಕೊಡಬೇಕು ಎಂಬ ಭಾವನೆ ಬೇರೂರಿದೆ. ಇದು ಯಾವ ರಾಷ್ಟ್ರಕ್ಕೂ ಶುಭ ಸೂಚನೆ ಅಲ್ಲ.







ಲೇಖನ

# ಬಸವಣ್ಣನವರು ರೂಪಿಸಿದ ಸಮಾಜ

– ನಾಡೋಜ ಡಾ. ಗೊ.ರು. ಚನ್ನಬಸಪ್ಪ *

ಮನಸ್ಸಿಗೆ ಬಂದ ಬಯಕೆ, ಬಯಕೆಗೆ ತಕ್ಕ ಪೂರೈಕೆ, ಬೇಡಿದ್ದನ್ನು ನೀಡುವ ಕಲ್ಪತರು–ಕಾಮಧೇನು, ಕಣ್ಣೀರು–ಬೆವರುಗಳಿಲ್ಲದ ಆನಂದ, ಅಪರಿಮಿತವಾದ ಆಯುಸ್ಸು, ತಿಂದು ತೇಗುವಷ್ಟು ಭಕ್ಷ್ಯ ಭೋಜ್ಯ, ಕುಡಿದು ಮರೆಯುವಷ್ಟು ಸುರಾಪಾನ, ಅಪ್ಪಿ ಭೋಗಿಸುವಷ್ಟು ಅಪ್ಸರೆಯರು, ಹೊತ್ತಿನ ಗೊತ್ತಿಲ್ಲ ಕತ್ತಲೆಯ ಕಾಟವಿಲ್ಲ, ರೋಗವಿಲ್ಲದ ಯೋಗ, ಸೋಲಿಲ್ಲದ ಭೋಗ, ಅಲ್ಲಿ ಸೂರ್ಯ ತಂಪು, ಚಂದ್ರ ಬೆಚ್ಚಗೆ – ಹೀಗೆ ಸ್ವರ್ಗಸುಖದ ಬಗ್ಗೆ ಏನೇನೋ ವರ್ಣಿಸಿದರು ನಮ್ಮ ಪೌರಾಣಿಕರು. ಎಂದಿನಿಂದಲೂ ಸುಖಾಪೇಕ್ಷಿಯಾದ ಮಾನವನನ್ನು ಕೇಳಬೇಕೇ? ಈ ವರ್ಣನೆಯನ್ನು ಕೇಳಿ ಹುಚ್ಚನಾದ.

ಆದರೆ ಅದೆಲ್ಲ ಸತ್ತನಂತರ ದೊರೆಯುವ ಸುಖವಾಗಿತ್ತು. ಸಾಯುವವರೆಗೆ ಕಾಯುವುದಾದರೂ ಹೇಗೆ? ಅಥವಾ ಆ ಸ್ವರ್ಗಸುಖದ ಆಸೆಗಾಗಿ ಬೇಗ ಸಾಯುವುದೇ? ಬಹಳ ಯೋಚನೆ ಮಾಡಿದ ಮಾನವ. ಬುದ್ಧಿ ಜೀವಿಯಲ್ಲವೇ ಅವನು? ಸತ್ತನಂತರ ಸಿಗಬಹುದಾದ ಸ್ವರ್ಗವನ್ನು ಭೂಮಿಯ ಮೇಲೆ ಅನುಭವಿಸಲಾರದೇಕೆ ಎಂದು ಅವನಿಗನಿಸಿತು. ಅಂತೆ ಯಾವ ನೋವೂ ಇಲ್ಲದ, ಯಾವ ದುಃಖವೂ ಇಲ್ಲದ ಹರ್ಷೋದ್ಯಾನವನ್ನು ಇಲ್ಲೇ ಸೃಷ್ಟಿಸಲೆತ್ನಿಸಿದ.

ನಮಗೆಲ್ಲ ತಿಳಿದಂತೆ ಆದಿ ಮಾನವನ ಜೀವನ ಬೆತ್ತಲೆ ಮತ್ತು ಕೊರತೆಗಳ ಆಗರ. ತನ್ನ ಉಳಿವಿಕೆಗಾಗಿ, ಆ ಕೊರತೆಯ ಪೂರೈಕೆಗಾಗಿ ಪ್ರಚಂಡ ಹೋರಾಟ ನಡೆಸುತ್ತಲೇ ಭೂಮಿಯ ಮೇಲೆ ತನ್ನ ಬದುಕನ್ನು ಆರಂಭಿಸಿದ ಮಾನವ. ಆದರೂ ಶ್ರಮವಿಲ್ಲದೆ, ಸಮೃದ್ಧವಾಗಿ ದೊರೆಯಬಹುದಾದ 'ಸ್ವರ್ಗಸುಖ'ವೊಂದರ ಕನಸಿನ ಬೆನ್ನು ಹತ್ತಿಕೊಂಡೇ ಬಂದ. ತಾನು ಬಿತ್ತದ ಕಡೆ ಕೊಯ್ಯಲು ಅವನು ಯಾವಾಗಲೂ ಪ್ರಯತ್ನಿಸುತ್ತಲೇ ಇದ್ದಾನೆ.

ಮಾನವ ಯಾವಾಗಲೂ ದೈಹಿಕ ಶ್ರಮವನ್ನು ತಪ್ಪಿಸಿ ಕೊಳ್ಳಲು ಬಳಸಿದ್ದಾನೆ. ಸುಖಕ್ಕಾಗಿ ಇದ್ದ ಬುದ್ಧಿಯನ್ನೆಲ್ಲ ಬಳಸಿದ್ದಾನೆ. ಬುದ್ಧಿಯ ಕಸರತ್ತು ಎಷ್ಟಾದರೂ ಆಗಬಹುದು. ಹೇಗಾದರೂ ಸುಖ ದೊರೆತರೆ ಆಯಿತು. ಒಂದು ವೇಳೆ ಆ ಸುಖದ ಸಂಪಾದನೆಗೆ ಬೆವರು ಕಣ್ಣೀರುಗಳು ಅಗತ್ಯವೆನಿಸಿದರೆ ಅವು ತನ್ನವೇ ಇರಬೇಕೆಂದೇನಿಲ್ಲ. ತನ್ನ ಸುಖಕ್ಕಾಗಿ ಯಾರು ಬೆವರು ಕಣ್ಣೀರು ಹರಿಸಿದರೂ ಆದೀತು. ಅದರಿಂದ ದೊರೆಯುವ ಫಲ ತನ್ನದಾದರೆ ಸರಿ.

ಸುಖಾಪೇಕ್ಷೆಯ ಸ್ವಭಾವವೇ ಸಾಹಸ. ಆದರೆ ದೈಹಿಕ ಶ್ರಮವೊಂದನ್ನು ಬಿಟ್ಟು ಅವನು ಏನನ್ನು ಬೇಕಾದರೂ ಮಾಡಲು ಸಿದ್ಧ. ಆ ಸಾಹಸದ ಫಲವಾಗಿ ಸೃಷ್ಟಿಯಾದುದೇ ಗುಲಾಮಗಿರಿ. ಇದರಿಂದ ಒಬ್ಬರು ಅಥವಾ ಕೆಲವರು ಸುಖವಾಗಿ ಜೀವಿಸಲು ಅನೇಕರು ಬೆವರು ಹರಿಸಿ ದುಡಿದು ಮಡಿಯಬೇಕಾಯಿತು. ಬಹುತೇಕ ಎಲ್ಲ ಪುರಾತನ ನಾಗರಿಕತೆಗಳೂ ಈ ಗುಲಾಮಗಿರಿಯನ್ನೇ ಆಧರಿಸಿದ್ದು, ಗುಲಾಮರು ರೊಚ್ಚಿಗೆದ್ದ ಕೂಡಲೇ ಅಥವಾ ಸುಖಾಪೇಕ್ಷಿಗಳ ವೈಭವ ವಿಲಾಸಗಳು ಶಿಥಿಲಗೊಂಡ ಕೂಡಲೇ ಛಿದ್ರಗೊಂಡಿವೆ. ಮಧ್ಯಯುಗದಲ್ಲಿ ಈ ಗುಲಾಮಗಿರಿಯ ಸ್ಥಳದಲ್ಲಿ ಬದಲಾವಣೆಯಾದ ಕಾಲಕ್ಕೆ ಹೆಚ್ಚು ಹೊಂದಿಕೊಂಡ ಜೀತಗಾರಿಕೆ ಬಂದಿತು. ಆಧುನಿಕ ಕಾಲದಲ್ಲಿ ಅದೂ ಸಹ ಹೋಗಿ ಆ ಸ್ಥಳವನ್ನು ಬಂಡವಾಳಶಾಹಿ ವರ್ಗಕ್ಕಾಗಿ ಸಂಬಳಕ್ಕೆ ದುಡಿಯುವ ಶ್ರಮಜೀವಿಗಳು ತುಂಬಿದ್ದಾರೆ.

ಈ ಎಲ್ಲ ಯುಗಗಳಲ್ಲೂ 'ಮಾನವ ಶ್ರಮ' ಅತ್ಯಂತ ಅಗತ್ಯವೆಂದರೂ ಕಷ್ಟದಾಯಕ ಎಂದು ಪರಿಗಣಿಸಲ್ಪಟ್ಟಿದೆ. ಜೀವನ ಮತ್ತು ನಾಗರಿಕತೆಗಳ ವ್ಯವಹಾರ ಸಾಧ್ಯತೆಗಾಗಿ ಅದನ್ನು ನಿರ್ವಹಿಸಲಾಗಿದೆ.

ಭಾರತದಲ್ಲಿ ನಾವು ವರ್ಣಗಳ ಆಧಾರದ ಮೇಲೆ ಒಂದು ವಿಚಿತ್ರ ಸಾಮಾಜಿಕ ಪದ್ಧತಿಯನ್ನು ಕಂಡುಹಿಡಿದೆವು. ಆರಂಭದಲ್ಲಿ ಬ್ರಾಹ್ಮಣ ಮತ್ತು ಕ್ಷತ್ರಿಯ ಎಂಬ ಎರಡು ವರ್ಣಗಳು ಮಾತ್ರ ಇದ್ದವು. ಕ್ರಮೇಣ ಅವು ನಾಲ್ಕು ಆದವು. ಮತ ಕೃತಿಗಳ ಪ್ರಕಾರ ವರ್ಣಾಶ್ರಮ ಧರ್ಮವು ಪ್ರಕೃತಿ(ಸ್ವಭಾವ) ಮತ್ತು ಪ್ರವೃತ್ತಿ(ಕರ್ಮ)ಗಳನ್ನು ಆಧರಿಸಿತ್ತು. ವಾಸ್ತವ ಜೀವನದಲ್ಲಿ ಒಬ್ಬ ವ್ಯಕ್ತಿಯ ಸ್ಥಾನಮಾನವನ್ನು ನೈತಿಕ ಮಟ್ಟದಿಂದ ನಿಷ್ಕರ್ಷೆ ಮಾಡದೆ ಆತನು ಉದ್ಯುಕ್ತನಾಗಿದ್ದ ಉದ್ಯೋಗದಿಂದ

* ಜಾನಪದ ವಿದ್ವಾಂಸರು, # ೪೦೬, ಪ್ರಣಾಮ, 'ಎಫ್' ರಸ್ತೆ, ೨ನೇ ಫೇಸ್, ಐಡಿಯಲ್ ಹೋಮ್ಸ್ ಟೌನ್‌ಶಿಪ್, ರಾಜರಾಜೇಶ್ವರಿನಗರ, ಬೆಂಗಳೂರು-೯೮

ಅಳೆಯಲಾಗಿತ್ತು. ಕಾಲಗತಿಯಲ್ಲಿ ಕರ್ಮ ಎನ್ನುವುದು ಬಹುತೇಕ ಈ ಸ್ವಭಾವ ಎನ್ನುವುದನ್ನೇ ತಳ್ಳಿ ಹಾಕಿತು. ಇದರಿಂದಾಗಿ ಭಾರತದಲ್ಲಿ ನಾಲ್ಕು ವರ್ಣಗಳ ಸ್ಥಳದಲ್ಲಿ ವೃತ್ತಿ ಮತ್ತು ವಾಡಿಕೆಗಳನ್ನು ಆಧರಿಸಿ ನಾಲ್ಕು ಸಾವಿರ ಜಾತಿಗಳು ಏರ್ಪಟ್ಟವು.

ಇತಿಹಾಸದ ಅವಧಿಯಲ್ಲಿ ಈ ವೃತ್ತಿವಾಡಿಕೆಗಳು ಅಥವಾ ಉದ್ಯೋಗಗಳು ಜಾತಿ ಭ್ರಾಂತಿ ಮೂಲವಾದ ವಿಲಕ್ಷಣ ಪರಂಪರೆಗೆ ಕಾರಣವಾದವು. ಕೇವಲ ಧಾರ್ಮಿಕ ಕಾರ್ಯಗಳನ್ನು ಮಾಡುವುದು ಉನ್ನತ ಜಾತಿ ಎನಿಸಿತು. ಕೆಳದರ್ಜೆಯ ಹಾಗೂ ಬೇಸರದ ದೈಹಿಕ ಶ್ರಮದ ಕೆಲಸ ಮಾಡುವುದು ಕೀಳು ಜಾತಿಯಾಯಿತು. ನಾಲ್ಕು ಸಾವಿರ ಮೆಟ್ಟಿಲುಗಳ ಈ ಒಂದು ಸಾಮಾಜಿಕ ಏಣಿಗೆ ಭಂಗಿ ಬುಡದ ಮೆಟ್ಟಿಲಾದ. ವಾಸ್ತವವಾಗಿ, ಒಬ್ಬರ ಹೆಗಲ ಮೇಲೆ ಒಬ್ಬರು ನಿಂತ ಈ ಏಣಿಯ ತುತ್ತ ತುದಿಯಲ್ಲಿ ಬ್ರಾಹ್ಮಣ ನಿಂತ. ತಾನು ಮಾಡುವ ಸ್ವಸ್ತಿವಾಚನಕ್ಕೆ ಬದಲಾಗಿ ಎಲ್ಲ ಭೌತಿಕ ಭೋಗವಸ್ತುಗಳನ್ನು ಬ್ರಾಹ್ಮಣನೆನಿಸಿಕೊಂಡವನು ಪಡೆಯುತ್ತಿದ್ದ. ಭಂಗಿ ಕಸಗುಡಿಸಬೇಕಾಗಿ ಬಂದು ಅಸ್ಪೃಶ್ಯನಾದ. ದುಡಿಮೆಯ ದುರಂತ ಆರಂಭವಾದುದೇ ಇಲ್ಲಿ ; ವರ್ಗಭೇದದ ಸುಳಿದೆಗೆದುದೇ ಇಲ್ಲಿ. ಶ್ರೇಷ್ಠ-ಕನಿಷ್ಠಗಳ ಸಮರ್ಥನೆಗೆ ಸುಖಾಪೇಕ್ಷಿಗಳ ಕೈಗೆ ಸಿಕ್ಕಿದ ಪ್ರಭಾವಪೂರ್ಣ ಅಸ್ತ್ರವೆಂದರೆ ಧರ್ಮ. ಧರ್ಮದ ಹೆಸರಿನಲ್ಲಿ ನಡೆಸುವ ಪೂಜೆ ಪೌರೋಹಿತ್ಯಗಳು **'ಲೋಕ ಕಲ್ಯಾಣಾರ್ಥ'** ಎಂಬ ರೂಪು ಪಡೆದವು. ಒಟ್ಟಾರೆ, ಈ ಪೂಜೆ ಪೌರೋಹಿತ್ಯಗಳಿಗೆ ಸಾಮಗ್ರಿಯಾದ ಶ್ರಮಜೀವಿಗೆ ಮಾತ್ರ ಸಮಾಜದಲ್ಲಿ ಗೌರವ ವಿರಲಿಲ್ಲ. ಈ ಅನಿಷ್ಟ ಅತ್ಯಂತ ಆಳವಾಗಿ ಬೇರುಬಿಟ್ಟು ವ್ಯಾಪಕವಾಗಿ ಹರಡಿತು. ಏಕೆಂದರೆ ಅದು ಧರ್ಮ ಮತ್ತು ಸಂಪ್ರದಾಯಗಳೆರಡರ ಅಂಗೀಕಾರವನ್ನು ಪಡೆದಿತ್ತು.

ಏನೇ ಇದ್ದರೂ. ವಿವಿಧ ನಾಗರಿಕತೆಗಳಲ್ಲಿ ನಾನಾ ರೂಪು ಮತ್ತು ಆಕಾರಗಳನ್ನು ತಾಳಿರುವ ದೈಹಿಕ ಶ್ರಮದ ಅವನತಿಯು ಆರ್ಥಿಕ ಮತ್ತು ಸಾಮಾಜಿಕ ಅನಿಷ್ಟಗಳಿಗೆ ಕಾರಣವಾಯಿತು. ಸಮಾಜದಲ್ಲಿ ಒಂದು ಕಡೆ ಕೆಲವೇ ಜನ ಶ್ರೀಮಂತರು ಮತ್ತು ಸೋಮಾರಿಗಳಿದ್ದರೆ, ಮತ್ತೊಂದು ಕಡೆ ಅನೇಕಜನಅತ್ಯಂತಬಡವರುಮತ್ತುಶ್ರಮಜೀವಿಗಳಾದವರು. ಶ್ರೀಮಂತರು ಯಥೇಚ್ಛ ವೈಭವ ಹಾಗೂ ಅನಗತ್ಯ ವಸ್ತುಗಳ ಉತ್ಪಾದನೆಗೆ ಶ್ರಮ ಜೀವಿಗಳನ್ನು ಬಳಸಿಕೊಂಡರು. ಅಗತ್ಯವಸ್ತುಗಳ ಉತ್ಪಾದನೆ ಬೇಡಿಕೆಗಿಂತ ಕಡಿಮೆಯಾಯಿತು. ಆದುದರಿಂದಲೇ ವಿಶ್ವವು ಯಾವಾಗಲೂ ಅಗತ್ಯ ವಸ್ತುಗಳ ಕೊರತೆಯನ್ನು ಅನುಭವಿಸುತ್ತಿರುವುದು.

ಈಗ ಜೀವನದ ಅಗತ್ಯಗಳ ಬಗೆಗೆ ಹೆಚ್ಚು ಹೆಚ್ಚು ಜಾಗೃತವಾಗುತ್ತಿರುವ ಭಾರಿ ಪ್ರಮಾಣದ ಜನಸಂಖ್ಯೆ ವಿಶ್ವಾದ್ಯಂತ ತ್ವರಿತಗತಿಯಲ್ಲಿ ಬೆಳೆಯುತ್ತಿದೆ. ಮಾನವ ಸ್ವಭಾವವು ಕೊರತೆಯಿಲ್ಲದ ಜೀವನವನ್ನು ಬಯಸುತ್ತಿದೆ. ತನ್ನ ಭೌತಿಕ ಮಟ್ಟವನ್ನು ಎತ್ತರಿಸಲು ಮನುಷ್ಯ ತೀವ್ರ ಪ್ರಯತ್ನ ನಡೆಸಿದ್ದಾನೆ. ಆದರೆ ದೈಹಿಕ ಶ್ರಮಕ್ಕೆ ಮಾನ್ಯತೆ ಕೊಡದ ಹೊರತು ಇದು ಅಸಾಧ್ಯವೆಂಬುದನ್ನು ನಾವು ಮರೆಯುವಂತಿಲ್ಲ.

ಈ ಹಿನ್ನಲೆಯಲ್ಲಿ ನಾವು ಬಸವಣ್ಣನವರ ಸಾಮಾಜಿಕ ನೀತಿಯನ್ನು ನೋಡಬೇಕಾಗುತ್ತದೆ. ಬಸವಣ್ಣನವರು ರೂಪಿಸಿದ ಸಮಾಜಕ್ಕೆ ಈ ಶ್ರಮದ ದುಡಿಮೆಯೇ ಮೊದಲ ಆಧಾರವಾಗಿತ್ತು. ಆ ದುಡಿಮೆಗೇ ಶರಣರು **'ಕಾಯಕ'** ಎಂದಿರುವುದು. ಈ ಕಾಯಕದ ಮಹತ್ವವನ್ನು ರಷ್ಯದ ಟಾಲ್‌ಸ್ಟಾಯ್, ಭಾರತದ ಗಾಂಧಿ ಸ್ಪಷ್ಟವಾಗಿ ಸಾರಿದ್ದಾರೆ. ತನ್ನ ಅನ್ನವನ್ನು ತನ್ನ ಶ್ರಮದಿಂದಲೇ ಗಳಿಸಬೇಕೆಂಬುದು ಮಾನವನ ಮೊದಲ ಹಾಗೂ ನಿರ್ವಿವಾದವಾದ ಕರ್ತವ್ಯ ಎಂದು ಅವರು ಹೇಳಿದ್ದಾರೆ. **'ನಿನ್ನ ಶ್ರಮದ ಬೆವರಿನಲ್ಲಿ ನಿನ್ನ ರೊಟ್ಟಿಯನ್ನು ತಿನ್ನು'** ಎನ್ನುವುದು ಜೀವನದ ಮೂಲ ಹಾಗೂ ಅಗತ್ಯ ಶಾಸನ. ಶ್ರಮವೊಂದೇ ಜೀವನಕ್ಕೆ ಚೇತನ. ಮಾನವನ ಕಾರ್ಪಣ್ಯ, ಹಸಿವು, ಅಪರಾಧಗಳಿಗೆ ಈ ಮಹೋನ್ನತ ಜೀವನ ಸೂತ್ರದ ಉಪೇಕ್ಷೆಯೇ ಕಾರಣ.

ಮಾನವ ಅದೆಷ್ಟೋ ಕೆಲಸಗಳನ್ನು ಮಾಡುತ್ತಾನೆ. ಅಸಂಖ್ಯಾತ ಕಾನೂನು ಮತ್ತು ನಿಯಮಗಳನ್ನು ಅಂಗೀಕರಿಸುತ್ತಾನೆ. ಆದರೆ ಇವಾವುವೂ ಸಮಸ್ಯೆಗಳಿಗೆ ಪರಿಹಾರ ನೀಡಿಲ್ಲ. ಏಕೆಂದರೆ ಹಸಿವನ್ನು ಪರಿಹರಿಸಲು ಅಗತ್ಯವಾದುದು ಜೀವನಾಧಾರದ ದೈಹಿಕ ಶ್ರಮ. ಮಾನವನು ತನ್ನ ಜೀವನದ ಪ್ರಮುಖ ಅಗತ್ಯಗಳಾದ ಆಹಾರ, ಬಟ್ಟೆ ಮತ್ತು ವಸತಿ ಮೊದಲಾದವನ್ನು ತನ್ನ ವೈಯಕ್ತಿಕ ಶ್ರಮದಿಂದ ಉತ್ಪಾದಿಸಬೇಕು. ಅವನ ಉತ್ಪಾದನೆಯು ಅಗತ್ಯಕ್ಕೆ ಅನುಗುಣವಾದ ಬಳಕೆಗೆ ಆಗಬೇಕೇ ವಿನಹ, ತನ್ನ ದುರ್ಬಲ ಸಹೋದರರಿಗೆ ಲಾಭಕ್ಕೆ ಮಾರಾಟವಾಗಬಾರದು. ದೈಹಿಕ ಶ್ರಮದ ಧರ್ಮ ಅದು. ಬಸವಣ್ಣನವರ ಸಾಮಾಜಿಕ ನೀತಿಯಲ್ಲಿ ಇದೇ **'ದಾಸೋಹ'**ದ ಅರ್ಥ ಪಡೆದಿರುವುದು. ವ್ಯಕ್ತಿಯ ದೈಹಿಕ ದುಡಿಮೆ ಎಂದರೆ ಸಮಾಜ ಕ್ಷೇಮದ ದೃಷ್ಟಿಯಿಂದ ಪಡುವ ಶ್ರಮ ಸಮಾಜದ ಒಟ್ಟು ಸಂಪದ ಅಭಿವೃದ್ಧಿಗೆ ಸಾಧಕವಾಗುತ್ತದೆ. ಅಸಮಾನತೆಯ ನಿವಾರಣೆಗೆ



ನೆರವಾಗುತ್ತದೆ. ಬಸವಣ್ಣನವರು ಮಹತ್ವ ನೀಡಿದ ಕಾಯಕದ ವೈಶಿಷ್ಟ್ಯವೆಂದರೆ ಶ್ರಮದ ದುಡಿಮೆ. ಅಂತಹ ದುಡಿಮೆಯಿಂದ ದೇಹದ ಆರೋಗ್ಯ ಉತ್ತಮಗೊಳ್ಳುತ್ತದೆ. ಕೃತಕ ಹಾಗೂ ನಿರಾಳ ಜೀವನ ಸರಳ ಹಾಗೂ ಸಹಿಷ್ಣು ಜೀವನವಾಗುತ್ತದೆ. ಕಾಯಕದಿಂದ ಬೌದ್ಧಿಕ ಮತ್ತು ದೈಹಿಕ ದುಡಿಮೆಗಳ ಮಧ್ಯೆ ಇರುವ ಅಂತರ ಮಾಯವಾಗುತ್ತದೆ. ಅಂದರೆ ಮಾನಸಿಕ ಕೆಲಸದ ದೊಡ್ಡಸ್ತಿಕೆ ಮತ್ತು ದೈಹಿಕ ಕೆಲಸದ ನಿಕೃಷ್ಟತೆಗಳು ಮಾಯವಾಗಿ ಜಾತಿ ಅಥವಾ ವರ್ಗಭೇದಗಳು ಇಲ್ಲವಾಗುತ್ತವೆ.

ಕಾಯಕ ಸೂತ್ರದ ಪಾಲನೆಯಿಂದ ಬಸವಣ್ಣನವರು ಸಮಾಜ ರಚನೆಯಲ್ಲಿ ಒಂದು ಮೌನ ಕ್ರಾಂತಿಯನ್ನುಂಟು ಮಾಡಿದರು. ಕಾಯಕದಿಂದ ವ್ಯಕ್ತಿಯ ಹೋರಾಟ ತನ್ನದಾಗಿ ವೈಯಕ್ತಿಕ ಅಸ್ತಿತ್ವಕ್ಕೆ ಬದಲಾಗಿ ಸಮಾಜದ ಸೇವೆಗಾಗಿ ಮೀಸಲಾಯಿತು. ಸಮಾಜದಲ್ಲಿನ ಪಾಶವೀ ಶಾಸನಕ್ಕೆ ಬದಲಾಗಿ ಮಾನವೀ ಶಾಸನ ಸೃಷ್ಟಿಯಾಯಿತು.

ಶರಣರ ಅರ್ಥಹೀನ ದೈಹಿಕ ದುಡಿಮೆಯಲ್ಲ; ಅನ್ಯರ ಸುಖಕ್ಕಾಗಿ ಬೆವರು ಹರಿಸುವ ನೀತಿಹೀನ ಜೀತವಲ್ಲ ಅಥವಾ ಭೌತಿಕ ಸುಖವೇ ಅದರ ಪರಮೋದ್ದೇಶವಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ದುಡಿದೇ ಉಣ್ಣಬೇಕು, ಆ ದುಡಿಮೆ ಸತ್ಯವಾಗಿರಬೇಕು, ಶುದ್ಧವಾಗಿರಬೇಕು. ದುಡಿಯುವುದು ಜೀವನದ ಆಧಾರಕ್ಕಾದರೂ ದುಡಿಮೆಯ ಫಲವನ್ನು ಸಮಾಜಕ್ಕೆ ಅರ್ಪಿಸಬೇಕು. ನಾಳೆಗೆಂದು ಕೂಡಿಡದೆ ಅಂದಂದಿನ ಫಲ ಅಂದಂದೇ ಬಳಕೆಯಾಗಬೇಕು. ಮಾಡಿದೆನೆಂಬುದು ಮನದಲ್ಲಿ ಹೊಳೆಯಬಾರದು- ಇದು ಕಾಯಕದ ಧರ್ಮ. ಕಾಯಕದ ಸಹಜ ಚಿತ್ರವನ್ನು ನೀಡುವ ಒಂದು ವಚನ ಹೀಗಿದೆ;

**ಕಂದಿಸಿ ಕುಂದಿಸಿ ಬಾಧಿಸಿ ನೋಯಿಸಿ**
**ಕಂಡಕಂಡವರ ಬೇಡಿ ತಂದು ಜಂಗಮ ಲಿಂಗಕ್ಕೆ**
**ಮಾಡಿದೆನೆಂಬ ದಂದುಗದ ಮಾಟಕ್ಕೆ ಲಿಂಗನೈವೇದ್ಯ**
**ಸಲ್ಲದು ತನುಕರಗಿ, ಮನಬಳಲಿ, ಬಂದ ತೆರದನುವರಿದು**
**ಸಂದಿಲ್ಲದೆ ಸಂಶಯವಿಲ್ಲದೆ**
**ಜಂಗಮಲಿಂಗಕ್ಕೆ ದಾಸೋಹವೇ ಮಾಟ,**
**ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು**
**ಲಿಂಗಕ್ಕರ್ಪಿತವಲ್ಲದೆ ದುರಾಸೆಯಿಂದ ಬಂದುದು ಅನರ್ಪಿತ**
**ಇದು ಕಾರಣ ಶುದ್ಧ ಕಾಯಕದ ನಿತ್ಯದ್ರವ್ಯವೆಂದರೆ**
**ಚಂದೇಶ್ವರ ಲಿಂಗಕ್ಕೆ ನೈವೇದ್ಯ ಸಂದಿತ್ತು ಕೇಳಯ್ಯಾ!**

ಕಾಯಕ ಶಬ್ದಕ್ಕೆ ವ್ಯಾಖ್ಯಾನ ಬರೆದಂತಿರುವ ಈ ವಚನವನ್ನು ಗಮನಿಸಿದರೆ ದುಡಿಮೆಯ ಮಹತ್ವದ ಅರಿವು ನಮಗಾಗದೇ ಇರದು. ಬಸವಣ್ಣನವರು ಧರ್ಮದ ಹೆಸರಿನಲ್ಲಿ ಜಾತಿಯ ತಳಹದಿಯ ಮೇಲೆ ಸಮಾಜವನ್ನು ರಚಿಸಲಿಲ್ಲ. ಸಮಾಜ ರಚನೆಗೆ ಧರ್ಮವನ್ನೇ ಆಧಾರವಾಗಿ ಮಾಡಿಕೊಂಡರು. ಎಲ್ಲಕ್ಕಿಂತ ಮೊದಲು ತಮ್ಮನ್ನು ತಾವು ಜಾತಿಯ ಬಲೆಯಿಂದ ದೂರವಿರಿಸಿಕೊಂಡರು;

**'ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ**
**ಕಷ್ಟತನದ ಹೊರೆಯ ಹೊರಿಸದಿರಯ್ಯಾ**
**ದಾಸಯ್ಯ ಶಿವದಾನವನೆರೆಯ ನೋಡಯ್ಯ**
**ಕಕ್ಕಯ್ಯನೊಕ್ಕುದನಿಕ್ಕ ನೋಡಯ್ಯ**
**ಮನ್ನಣೆಯ ಚೆನ್ನಯ್ಯನೆನ್ನುವ ಮನ್ನಿಸ**
**ಉನ್ನತ ಮಹಿಮ**
**ಕೂಡಲಸಂಗಮದೇವಾ ಶಿವಧೋ, ಶಿವಧೋ.'**

ಉತ್ತಮ ಕುಲವೆಂಬುದು ತನಗೆ ಹೊರೆ ಎಂದು ಭಾವಿಸಿದ್ದಾರೆ ಬಸವಣ್ಣನವರು. ಸಮಾಜದ ಕೆಳಸ್ತರದಲ್ಲಿದ್ದ ವ್ಯಕ್ತಿಗಳು ತನ್ನನ್ನು ಮನ್ನಿಸುವುದಿಲ್ಲ ಎನ್ನುವ ಮಾತು ಎಷ್ಟು ಅರ್ಥಪೂರ್ಣವಾಗಿದೆ! ಬಸವಣ್ಣ ಬಯಸಿದ್ದು ಮೇಲ್ವರ್ಗದವರ ಮನ್ನಣೆಯನ್ನಲ್ಲ. ಅವರು ಕೆಳಸ್ತರದವರ ಕೆಳಗೆ ನಿಂತು ಮಾತಾಡುತ್ತಾರೆ. **'ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಕೂಡಲಸಂಗನ ಶರಣರೇ ಕುಲಜರು'** ಎನ್ನುವ ಮಾತಿನಲ್ಲಿ ಕುಲದ ಅರ್ಥವನ್ನು ಹೇಳಿದ್ದಾರೆ. ಇಲ್ಲಿ ತನ್ನ ಮೇಲ್ಮೆಯನ್ನಷ್ಟೇ ತಿರಸ್ಕರಿಸಿಲ್ಲ. ಇತರ ಕೀಳ್ಮೆಯನ್ನೂ ತಿರಸ್ಕರಿಸಿರುವುದನ್ನು ನಾವು ಕಾಣುತ್ತೇವೆ.

ಬಸವಣ್ಣನವರು ರಾಜಕೀಯ ಮತ್ತು ಆರ್ಥಿಕ ಸ್ವಾತಂತ್ರ್ಯಗಳಿಗಿಂತ ಧಾರ್ಮಿಕ ಸ್ವಾತಂತ್ರ್ಯ ಮುಖ್ಯವೆಂದು ಸಾರಿದರು. ಜಾತಿ, ಲಿಂಗ, ವಯಸ್ಸು, ದೇಶಭಾಷೆಗಳ ಕಾರಣಕ್ಕಾಗಿ ಸಮಾಜದ ಯಾವುದೇ ವರ್ಗವನ್ನು ಧರ್ಮದ ಹೆಸರಿನಲ್ಲಿ ಹತ್ತಿಕ್ಕುವುದನ್ನು ಬಸವಣ್ಣನವರು ವಿರೋಧಿಸಿದರು.

ಅವರು ರೂಪಿಸಿದ ಸಮಾಜಕ್ಕೆ ಸ್ವಾತಂತ್ರ್ಯ ಮತ್ತು ಸಮಾನತೆಗಳೇ ಸೂತ್ರವಾಗಿದ್ದವು. ಆದರೆ ಇಂದಿನ ಗತಿ ಏನಾಗಿದೆ? ಧರ್ಮದ ಜಗಲಿಯ ಮೇಲೆ ಜಾತಿಗಳು ಮೆರೆಯುವಂತಾಗಿದೆ. ಜಾತಿಯನ್ನು ಹೊರಗಟ್ಟಿ ಧರ್ಮವನ್ನು ಒಳಗಿಟ್ಟುಕೊಳ್ಳುವ ಬದಲು, ಕದಿಯುವ ಬೆಕ್ಕನ್ನು ಒಳಗಿಟ್ಟುಕೊಂಡು ಕಾಯುವ ನಾಯನ್ನು ಹೊರಗಿಟ್ಟಂತೆ, ಧರ್ಮವನ್ನೇ ಹೊರಗಿಟ್ಟು ಜಾತಿಯನ್ನು ಒಳಗಿಟ್ಟುಕೊಂಡಿ

ದ್ದೇವೆ. ನಾಯಿಯನ್ನು '**ನಾರಾಯಣ**' ಎನ್ನುವ ನಮಗೆ, ಹಾವನ್ನು '**ಆದಿಶೇಷ**' ಎಂದು ಕರೆಯುವ ನಮಗೆ, ಹಂದಿಯನ್ನು '**ವರಾಹಸ್ವಾಮಿ**' ಎಂದು ಪೂಜಿಸುವ ನಮಗೆ ಕೋತಿಯನ್ನು '**ಆಂಜನೇಯ**' ಎಂದು ಭಜಿಸುವ ನಮಗೆ ಮಾನವನನ್ನು ಮಾನವ ಎಂದು ಕಾಣುವ ಸಭ್ಯತೆ ಸಜ್ಜನಿಕೆಗಳಿಲ್ಲ. ಆದರೆ ಮಾನವ-ಮಾನವರ ಮಧ್ಯೆ ಯಾವ ತಾರತಮ್ಯವನ್ನೂ ಬಸವಣ್ಣನವರು ಕಾಣಲಿಲ್ಲ. ಕೊನೆಗೆ ಅವರು ಹೆಣ್ಣು-ಗಂಡೆಂಬ ವ್ಯತ್ಯಾಸವೂ ಸಲ್ಲದೆಂದು ಹೇಳಿದರು. '**ಶರಣಸತಿ-ಲಿಂಗಪತಿ**' ಎಂದಿರುವಾಗ ಎಲ್ಲರೂ ಸಮಾನ ಎಂದರು. ಎಲ್ಲರಿಗೂ ಪೂಜಾ ಸ್ವಾತಂತ್ರ್ಯವಿದೆ ಎಂದು ಪೂಜಾರಿಕೆಯ ಮಧ್ಯಸ್ಥಿಕೆಯನ್ನೇ ಹಳಿದರು. ಈ ಸಂದರ್ಭದಲ್ಲಿ ಬಸವನ ಉಸಿರಾಗಿ ಬೆಳೆದ ನಮ್ಮ ಹಳ್ಳಿಯ ಹೆಣ್ಣೊಬ್ಬಳು ತನ್ನ ಬೀಸುವ ಪದದಲ್ಲಿ ಆಡಿರುವ ಮಾತುಗಳು ನಿಜಕ್ಕೂ ನಮ್ಮನ್ನು ಸೋಜಿಗಗೊಳಿಸುತ್ತವೆ. ಬಸವಣ್ಣನವರ ಸಂದೇಶ ಹೇಗೆ ಜನಸಾಮಾನ್ಯರನ್ನು ಮುಟ್ಟಿ ತಟ್ಟಿ ಜಾಗೃತ ಗೊಳಿಸಿದೆ ಎನ್ನುವುದು ಇದರಿಂದ ವೇದ್ಯವಾಗುತ್ತದೆ;

**ದೇವರಿಗೆ ಹೋಗಬೇಕು ದಾರಿಬಿಡೋ ಪೂಜಾರಿ**
**ದೇವರಿಗು ನನಗು ಒಳಮಾತು-ಇರುವಾಗ**
**ತಾವಿಗ್ಹೋಗಿ ಕೈಯ ಮುಗಿದೇನು !**

ಎನ್ನುತ್ತಾಳೆ ಆ ಹೆಣ್ಣು! ಪೂಜಾರಿ ಧರ್ಮವನ್ನು ವಿರೋಧಿಸಲು ಇದಕ್ಕಿಂತ ಪರಿಣಾಮಕಾರಿಯಾದ ಮಾತು ಬೇಕೇ? ಶ್ರಮಜೀವಿ ತಾಯಿ ಬಸವಣ್ಣನವರ ವಿಚಾರವನ್ನು ಹೇಗೆ ಅರಗಿಸಿಕೊಂಡಿದ್ದಾಳೆ ನೋಡಿ.

ಬಸವಣ್ಣನವರು ರೂಪಿಸಿದ ಸಮಾಜಕ್ಕೆ ಒಂದು ಶಿಸ್ತಿನ ಸಂಸ್ಕಾರವಿತ್ತು, ದೈವೀಧ್ಯಾನ, ಕಾಯಕದರ್ಶನ, ದಾಸೋಹ ಭಾವನೆ, ಸ್ತ್ರೀಪುರುಷ ಸಮಾನತೆ, ವಿಚಾರ ಮಂಥನ, ಶೂನ್ಯ ಸಂಪಾದನೆ – ಇವು ಆ ಶಿಸ್ತಿನ ಚೌಕಟ್ಟುಗಳು. ಈ ಚೌಕಟ್ಟುಗಳ ಪ್ರವೇಶಕ್ಕೆ ದುರ್ಗಮವಾದ ಭದ್ರಕೋಟೆಗಳಾಗಿರಲಿಲ್ಲ. ಸರ್ವರೂ ಸುಲಭವಾಗಿ ಅರಿತು ಆಚರಿಸುವಂತಹ ಮುಕ್ತದ್ವಾರಗಳಾಗಿದ್ದವು. ಎಂತಲೇ ನಾಡು ನುಡಿಗಳ ಗಡಿ ದಾಟಿ ಸಹಸ್ರ ಸಹಸ್ರ ಜನ ಬಂದು ಕಲ್ಯಾಣದಲ್ಲಿ ಸೇರಿದರು. ಬಸವಣ್ಣನವರು ಆ ಅಸಂಖ್ಯಾತರ ಕೇಂದ್ರ ಬಿಂದುವಾದರು.

ಬಸವಣ್ಣವರ ಸಮಾಜ ವ್ಯವಸ್ಥೆಯಲ್ಲಿ ಮೂರು ಮುಖ್ಯ ಕಾರ್ಯಸೂತ್ರಗಳಿವೆ. ಅವೆಂದರೆ ಅಜ್ಞಾನ ನಿರ್ಮೂಲನ, ಬಡತನ ನಿವಾರಣೆ ಮತ್ತು ಶೀಲ ಸಂಪಾದನೆ. ಈ ಸೂತ್ರಗಳೇ ನಮ್ಮ ಇಂದಿನ ಎಲ್ಲ ಅನಿಷ್ಟಗಳಿಗೂ ಪರಿಹಾರ ನೀಡಬೇಕಾಗಿದೆ. ■

### ಶ್ರೀವಾಣಿ

ಪ್ರತಿನಿತ್ಯ ಮಲಗುವ ಮುನ್ನ ನಡೆ ನುಡಿಗಳು ನಡೆಸಿದ ಒಳಿತು ಕೆಡಕುಗಳ ಜಮಾಖರ್ಚನ್ನು ಅವಲೋಕಿಸ ಬೇಕು. ಮರುದಿನ ತುಳಿಯಬೇಕಾದ ಗುರುಪಥವನ್ನು ಹುಡುಕುವುದರ ಮೂಲಕ ಶಿವಪಥದ ಕಡೆಗೆ ಸಾಗಬೇಕು. ವಿಕಾರ ವಿಮುಖವಾಗಿ ವಿಕಾಸ ಸುಮುಖವಾಗಿ ಹೆಜ್ಜೆ ಹಾಕುವುದರ ಮೂಲಕ ವಿಕಾರಗಳನ್ನು– ತನು, ಮನ, ಬುದ್ಧಿಯ ವಿಕಾರಗಳನ್ನು ಗೆಲ್ಲಬೇಕು.

* * *

ಸಾರ್ವಜನಿಕ ಹಣದ ಬಳಕೆಯಲ್ಲಿ 'ಎಚ್ಚರ'ವಿರಬೇಕು. 'ಯಾರದೋ ದುಡ್ಡು ಯಲ್ಲಮ್ಮನ ಜಾತ್ರೆ' ಎಂದಾಗ ಬಾರದು. ಜನನಾಯಕರ, ಆಡಳಿತ ಹಿಡಿದಿರುವ ಮುಖಂಡರ, ಅಧಿಕಾರಿಗಳ ಜೀವನಶೈಲಿ ಬದಲಾಗಬೇಕು.

* * *

'ನಿಷ್ಠೆ' ಎಲ್ಲದರ ಯಶಸ್ಸಿಗೆ ಕಾರಣ. ಆದರೆ ಇಂದು ನಿಷ್ಠೆಯಿಲ್ಲದವರೇ ಎಲ್ಲೆಲ್ಲೂ ಕಾಣುತ್ತಿದ್ದಾರೆ. ತತ್ತ್ವ ನಿಷ್ಠೆಯಿಲ್ಲ, ದೇಶನಿಷ್ಠೆಯಿಲ್ಲ, ಕರ್ತವ್ಯ ನಿಷ್ಠೆಯಿಲ್ಲ, ಸ್ಥಾನ ನಿಷ್ಠೆಯಿಲ್ಲ. ರಾಜಕೀಯದಲ್ಲಂತೂ ನಿಷ್ಠೆಯ ಮಾರಾಟವೇ ನಡೆದಿದೆ. ಸ್ವಾಮಿಗಳಾದವರೂ ಎಡವುತ್ತಿದ್ದಾರೆ. ನಿಷ್ಠೆ ಪಾಲನೆಯಲ್ಲಿ ಹೀಗಾಗಬಾರದು.

---

ಹೆದರದಿರು ಮನವೆ, ಬೆದರದಿರು ತನುವೆ
ನಿಜವನರಿತು ನಿಶ್ಚಿಂತನಾಗಿರು
ಫಲವಾದ ಮರನ ಕಲ್ಲಲ್ಲಿ ಇಡುವುದೊಂದು ಕೋಟಿ
ಎಲವದ ಮರನ ಇಡುವನೊಬ್ಬರ ಕಾಣೆ
ಭಕ್ತಿಯುಳ್ಳವರ ಬೈವರೊಂದು ಕೋಟಿ
ಭಕ್ತಿಯಿಲ್ಲದವರ ಬೈವರೊಬ್ಬರ ಕಾಣೆ
ನಿಮ್ಮ ಶರಣರ ನುಡಿಯೆ ಎನಗೆ ಗತಿ ಸೋಪಾನ
ಚೆನ್ನಮಲ್ಲಿಕಾರ್ಜುನ.

* * *

ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲರೆ
ಹಾವಿನ ಸಂಗವೇ ಲೇಸು ಕಂಡಯ್ಯ.
ಕಾಯವಿಕಾರವ ಕಳೆದು ಕಾಯದಲಿರ್ದರೆ
ಕಾಯದ ಸಂಗವೇ ಲೇಸು ಕಂಡಯ್ಯ.
ತಾಯಿ ರಕ್ಕಸಿಯಾದಂತೆ ಕಾಯ ವಿಕಾರವು
ಚೆನ್ನಮಲ್ಲಿಕಾರ್ಜುನ, ನೀನೊಲಿದವರು
ಕಾಯಗೊಂಡಿದ್ದರೆನಬೇಡ.

– ಅಕ್ಕಮಹಾದೇವಿ



ಪ್ರಾತಃಸ್ಮರಣೀಯರು

# ರಾವ್‌ಬಹದ್ದೂರ್ ಎಲೆ ಮಲ್ಲಪ್ಪಶೆಟ್ಟರು

– ಎಚ್.ಎಸ್. ಸಿದ್ಧಗಂಗಪ್ಪ *

ಕೆಲವರು ಸಮಾಜದಲ್ಲಿ ಕಾಯಕ ಜೀವಿಗಳಾಗಿ, ಪ್ರಾಮಾಣಿಕವಾಗಿ ಗಳಿಸಿದ ಹಣದಲ್ಲಿ ಬಹುಪಾಲನ್ನು ಸಮಾಜಕ್ಕೆ ವಿನಿಯೋಗಿಸಿ, ತಮ್ಮದೇ ಆದ ಅಳಿಸಲಾಗದ ಹೆಜ್ಜೆಗುರುತುಗಳನ್ನು ಮೂಡಿಸಿ, ಈ ಲೋಕಕ್ಕೆ ವಿದಾಯ ಹೇಳಿದರೂ, ಅವರು ಬಿಟ್ಟು ಹೋದ ಆದರ್ಶ ಮೌಲ್ಯಗಳ ಮೂಲಕ ಜೀವಂತವಾಗಿದ್ದಾರೆ. ಅಂಥವರಲ್ಲಿ ರಾವ್‌ಬಹದ್ದೂರ್ ಎಲೆ ಮಲ್ಲಪ್ಪಶೆಟ್ಟರು ಒಬ್ಬರು ಎಂದು ಹೇಳುವಾಗ ಅವರ ಬಗ್ಗೆ ಗೌರವ, ಅಭಿಮಾನ ಮೂಡುತ್ತದೆ.

**ಜನನ :** ಶ್ರೀಯುತರು ೧೭೩೭ನೇ ಯುವ ಸಂವತ್ಸರದ ಬಹುಳ ಏಕಾದಶೀ ದಿನ ಶರಣ ದಂಪತಿಗಳಾದ ಮರಿಸಿದ್ದಪ್ಪ ಶೆಟ್ಟರು-ತಾಯಿ ಶ್ರೀಮತಿ ಚೆನ್ನಮ್ಮ ಅವರ ತೃತೀಯ ಪುತ್ರರತ್ನವಾಗಿ, ಬೆಂಗಳೂರಿನಲ್ಲಿ ಜನಿಸಿದರೆಂದು ತಿಳಿದುಬರುತ್ತದೆ. ತಂದೆ-ತಾಯಿಗಳು ಪ್ರೀತಿಯಿಂದ ಇಟ್ಟ ಹೆಸರು ಮಲ್ಲಪ್ಪ. ಇವರದು ಸುಸಂಸ್ಕೃತ ವ್ಯಾಪಾರಸ್ಥ ಕುಟುಂಬ. ಇದು ಅವರಿಗೆ ವಂಶಪಾರಂಪರ್ಯವಾಗಿ ಬಂದ ವೃತ್ತಿ. ಅಡಿಕೆ ವ್ಯಾಪಾರದ ಜೊತೆಗೆ ಅಬ್ಕಾರಿ ಕಂಟ್ರಾಕ್ಟನ್ನು ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಬೆಂಗಳೂರಿನಲ್ಲಿ ಬದುಕಿ ಬಾಳಿದ ದಾನಶೂರರಲ್ಲಿ ಎಲೆ ಮಲ್ಲಪ್ಪಶೆಟ್ಟರು ಅಗ್ರಗಣ್ಯರಾಗಿದ್ದಾರೆ.

ಬಾಲ್ಯದಿಂದಲೂ ಚುರುಕ ಬುದ್ಧಿ, ಸೂಕ್ಷ್ಮಮತಿಗಳಾದ ಮಲ್ಲಪ್ಪನವರು, ಸರಳತೆ, ಸಜ್ಜನಿಕೆ, ತ್ಯಾಗ ಮೊದಲಾದ ಸದ್ಗುಣಗಳ ಗಣಿಯೇ ಆಗಿದ್ದರು. ವ್ಯವಹಾರಕ್ಕೆ ಬೇಕಾದಷ್ಟು ಶಿಕ್ಷಣ ಪಡೆದಿದ್ದರು.

ವೃತ್ತಿಯಲ್ಲಿ ಪ್ರಾಮಾಣಿಕತೆಯನ್ನು ರೂಢಿಸಿಕೊಂಡಿದ್ದರಿಂದ ದೇವರು ಅವರಿಗೆ ಅಪಾರವಾದ ಸಿರಿ ಸಂಪತ್ತನ್ನು ಕರುಣಿಸಿದ. ಬೇರೆಯವರು ಕರುಬುವಷ್ಟು ಸಿರಿವಂತರಾಗಿದ್ದರೂ, ಸರಳವಾದ ಜೀವನವನ್ನು ನಡೆಸುತ್ತಿದ್ದರು. ಮನುಷ್ಯನಾಗಿ ಹುಟ್ಟಿದ ಮೇಲೆ ತಮ್ಮ ಕೈಲಾದಷ್ಟು ಸಮಾಜಮುಖಿ ಸೇವೆಯಲ್ಲಿ ತೊಡಗಿಸಿಕೊಳ್ಳಬೇಕು ಎಂಬ ತುಡಿತ, ಕಳಕಳಿಯನ್ನು ಹೊಂದಿದ್ದರು.

ಎಲೆ ಮಲ್ಲಪ್ಪಶೆಟ್ಟರನ್ನು ಕುರಿತು ಲೇಖನ ಬರೆಯಲು ಪ್ರೇರಣೆ ನೀಡಿದುದು ಅವರು ಮಾಡಿದ ಅಪಾರವಾದ ದಾನ ಧರ್ಮಕಾರ್ಯಗಳಿಂದ, ಬಸವಾದಿ ಶರಣರ ಆದರ್ಶದ ಮುಂಬೆಳಕಿನಲ್ಲಿ ತಮ್ಮ ಜೀವನವನ್ನು ರೂಪಿಸಿಕೊಂಡು ಕೊನೆಯವರೆಗೂ ಹಾಗೆಯೇ ನಡೆದುಕೊಂಡರು. 'ಕೆರೆಯ ನೀರನು ಕೆರೆಗೆ ಚೆಲ್ಲಿ' ಎಂಬ ತ್ಯಾಗಗುಣ, ಬಿಟ್ಟುಹೋಗುವುದಕ್ಕಿಂತ ಕೊಟ್ಟು ಹೋಗುವುದು ಲೇಸು ಎಂಬ ಭಾವನೆ ಧರ್ಮಕಾರ್ಯಗಳಲ್ಲಿ ತೊಡಗಿಸಿಕೊಳ್ಳಲು ಪ್ರೇರಣೆ ನೀಡಿತು. ಅವರನ್ನು ಹತ್ತಿರದಿಂದ ಬಲ್ಲವರು 'ಕೊಡುಗೈ ದೊರೆ', 'ದಾನವೀರ' ಮೊದಲಾದ ಹೆಸರುಗಳಿಂದ ಕರೆಯುತ್ತಿದ್ದರೆಂದು ತಿಳಿದುಬರುತ್ತದೆ. ಅವರು ಮಾಡಿದ ಸತ್ಕಾರ್ಯಗಳಿಂದ ನಮಗಿಂದು ಪ್ರಾತಃಸ್ಮರಣೀಯರಾಗಿದ್ದಾರೆ. ಅವರು ಮಾಡಿದ ಧರ್ಮಕಾರ್ಯಗಳಲ್ಲಿ ಮುಖ್ಯವಾದ ಕೆಲವುಗಳನ್ನು ಹೀಗೆ ಉಲ್ಲೇಖಿಸಬಹುದಾಗಿದೆ.

ಬೆಂಗಳೂರು ನಗರದ ಮಲ್ಲೇಶ್ವರ ಬಡಾವಣೆಯಲ್ಲಿರುವ 'ಶ್ರೀ ಕಾಡು ಮಲ್ಲೇಶ್ವರ ಗುಡಿ' ಅತ್ಯಂತ ಪ್ರಾಚೀನವಾದುದು. ಪರಮ ಶಿವಭಕ್ತರಾದ ಮಲ್ಲಪ್ಪಶೆಟ್ಟರು ತುಂಬಾ ಜೀರ್ಣಾವಸ್ಥೆಯಲ್ಲಿದ್ದ ಮತ್ತು ಕೇವಲ ಗರ್ಭಗುಡಿ ಮಾತ್ರವಿದ್ದ ಈ ದೇವಾಲಯವನ್ನು ಅಪಾರವಾದ ಆರ್ಥಿಕ ನೆರವಿನಿಂದ ಕಟ್ಟಿಸಿದ್ದಾರೆ. ಈ ದೇವಾಲಯ ಮಲ್ಲಪ್ಪಶೆಟ್ಟರ ದೂರದೃಷ್ಟಿ ಹಾಗೂ ದೈವಭಕ್ತಿಗೆ ಸಾಕ್ಷಿಯಾಗಿದೆ. ಈ ದೇವಾಲಯಕ್ಕೆ ಆ ಕಾಲದಲ್ಲಿ ಸುಮಾರು ೩೦ ರಿಂದ ೪೦ ಸಾವಿರ ರೂ.ಗಳನ್ನು ವೆಚ್ಚ ಮಾಡಿದ್ದರೆಂದು ತಿಳಿದುಬರುತ್ತದೆ.

---

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೩೩ ೬೩೮೭೧





ಈ ದೇವಾಲಯದ ಮುಂಭಾಗದಲ್ಲಿ ತೀರ್ಥದ ಬಸವ ಎಂಬ ಮತ್ತೊಂದು ಕಟ್ಟಡವಿದೆ. ಇಲ್ಲಿ ಕಲ್ಲಿನ ಸೋಪಾನಗಳಿಂದ ಅಲಂಕೃತವಾದ ದೊಡ್ಡ ಕೊಳದಲ್ಲಿ ವೃಷಭಮೂರ್ತಿಯನ್ನು ಸ್ಥಾಪಿಸಲಾಗಿದೆ. ಈ ಕೊಳದ ಸುತ್ತಮುತ್ತ ಇರುವ ಕಟ್ಟಡಗಳನ್ನು ಈ ಪುಣ್ಯಾತ್ಮರು ಕಟ್ಟಿಸಿದರು. ಈ ಕಟ್ಟಡ ನಿರ್ಮಾಣಕ್ಕೆ ಸುಮಾರು ಹತ್ತು ಸಾವಿರ ರೂ.ಗಳು ಖರ್ಚಾಗಿರಬೇಕೆಂದು ಅವರ ಸಮಕಾಲೀನರು ಅಭಿಪ್ರಾಯಪಟ್ಟಿದ್ದರೆಂದು ತಿಳಿದು ಬರುತ್ತದೆ. ಆಗಿನ ಹತ್ತು ಸಾವಿರ ರೂ.ಗಳು ಇಂದು ಅಲ್ಪವೆನಿಸಬಹುದು. ಆಗಿನ ಕಾಲಕ್ಕೆ ಅದು ದೊಡ್ಡ ಮೊತ್ತವಾಗಿತ್ತು. ಈ ಕಟ್ಟಡ ಶ್ರೀ ಮಲ್ಲೇಶ್ವರನ ಗುಡಿಗೆ ಸೇರಿದ ಕಟ್ಟಡವಾಗಿದೆ.

ತ್ಯಾಗಗುಣಗಳನ್ನು ಮೈಗೂಡಿಸಿಕೊಂಡಿದ್ದ ಮಲ್ಲಪ್ಪಶೆಟ್ಟರು ಬೆಂಗಳೂರು ಜಿಲ್ಲೆ ಹೊಸಕೋಟೆ ತಾಲ್ಲೂಕು ವೀರನಹಳ್ಳಿಯಲ್ಲಿ ಒಂದು ದೊಡ್ಡ ಕೆರೆಯನ್ನು ಕಟ್ಟಿಸಿದ್ದಾರೆ. ಆ ಕೆರೆಯನ್ನು ಈಗಲೂ ಎಲೆ ಮಲ್ಲಪ್ಪಶೆಟ್ಟರ ಕೆರೆ ಎಂದು ಹೇಳುತ್ತಿದ್ದಾರೆ. ೪೦-೫೦ರ ದಶಕದಲ್ಲಿ (೧೯೪೦-೧೯೫೦) ಬೆಂಗಳೂರು ನಗರದಲ್ಲಿ ನೀರಿಗೆ ತೊಂದರೆಯಾದಾಗ ಈ ಕೆರೆಯಿಂದಲೇ ನೀರನ್ನು ಸರಬರಾಜು ಮಾಡಿ ಬೆಂಗಳೂರು ನಗರದ ಲಕ್ಷಾಂತರ ಜನರಿಗೆ ಉಪಕಾರ ಮಾಡಲಾಯಿತೆಂದು ತಿಳಿದು ಬರುತ್ತದೆ.

ಬೆಂಗಳೂರಿನಲ್ಲಿರುವ ಪ್ರಸಿದ್ಧವಾದ ಶ್ರೀ ವಾಣಿ ವಿಲಾಸ ಹೆರಿಗೆ ಆಸ್ಪತ್ರೆಯ ಮೂಲ ಕಟ್ಟಡಕ್ಕೆ ದಾನಶೀಲರಾದ ಮಲ್ಲಪ್ಪಶೆಟ್ಟರು ೩೫ ಸಾವಿರ ರೂಪಾಯಿಗಳನ್ನು ಕೊಟ್ಟಿದ್ದಾರೆ. ಈ ಆಸ್ಪತ್ರೆಗೆ ಸಹಾಯ ನೀಡಿದ ದಾನಿಗಳ ಹೆಸರುಗಳ ಪಟ್ಟಿಯಲ್ಲಿ ಶ್ರೀ ಮಲ್ಲಪ್ಪಶೆಟ್ಟರ ಹೆಸರು ಅಗ್ರಸ್ಥಾನದಲ್ಲಿದೆ.

ಕೋಲಾರ ಜಿಲ್ಲೆಯ ಬಂಗಾರಪೇಟೆಯಲ್ಲಿ ಮಲ್ಲಪ್ಪಶೆಟ್ಟರು ಸುಮಾರು ೩೦-೪೦ ಸಾವಿರಗಳನ್ನು ವೆಚ್ಚ ಮಾಡಿ ಒಂದು ಧರ್ಮಛತ್ರವನ್ನು ಕಟ್ಟಿಸಿದ್ದಾರೆ. ಈ ಛತ್ರವು ಪರಸ್ಥಳದಿಂದ ಬರುವ ಜನರಿಗೆ ತುಂಬಾ ಸಹಾಯವಾಗಿದೆ. ಅಲ್ಲಿ ವೀರಶೈವ-ಲಿಂಗಾಯತ ಬಡವಿದ್ಯಾರ್ಥಿಗಳಿಗೆ ಒಂದು ಉಚಿತ ಪ್ರಸಾದ ನಿಲಯವಿದೆ.

ಇಂತಹ ಅನೇಕ ಧರ್ಮಕಾರ್ಯಗಳನ್ನು ಮಾಡಿ ಜನರ ಪ್ರೀತಿ, ಗೌರವಗಳಿಗೆ ಪಾತ್ರರಾಗಿದ್ದಾರೆ. ಆದರೆ ಎಂದೂ ಅವರ ಹತ್ತಿರ 'ನಾನು ಮಾಡಿದೆ', 'ನಾ ಕೊಟ್ಟೆ' ಎಂಬ ಭಾವನೆ ಸುಳಿಯದಂತೆ ನೋಡಿಕೊಂಡರು. 'ಎಲ್ಲವೂ ಶಿವನಿಚ್ಛೆ' ಎಂದು ನಿರ್ಲಿಪ್ತ ಭಾವನೆಯಿಂದ ಶಿವಾರ್ಪಣೆ ಮಾಡುತ್ತಿದ್ದರು.

ಮಲ್ಲಪ್ಪಶೆಟ್ಟರು ತಮ್ಮ ಜೀವಿತ ಕಾಲದಲ್ಲಿ ಮಾಡಿದ ಮಹತ್ತರವಾದ ಕಾರ್ಯವೆಂದರೆ ಅನ್ನದಾನ. ದಾನ ದಾನಗಳಿಗಿಂತ ಅನ್ನದಾನ ಶ್ರೇಷ್ಠ ಎಂದು ನಂಬಿದ್ದರು. ಈ ಪುಣ್ಯಾತ್ಮರ ಗುಣವನ್ನು ಆಗಿನ ಕಾಲದ ಜನರು ಕಲ್ಯಾಣ ಶ್ರೀ ಬಸವಣ್ಣನವರಿಗೂ, ಬಳ್ಳಾರಿಯ ಶ್ರೀ ಸಕ್ಕರೆ ಕರಡಪ್ಪನವರಿಗೂ ಹೋಲಿಸುತ್ತಿದ್ದರಂತೆ. ೧೮೮೦ರ ದಶಕದಲ್ಲಿ ಕರ್ನಾಟಕದಲ್ಲಿ ಭಯಂಕರವಾದ ಬರಗಾಲ ಬಂದಿತ್ತೆಂದು ತಿಳಿದುಬರುತ್ತದೆ. ಅದನ್ನು 'ಧಾತು ಈಶ್ವರದ ದೊಡ್ಡ ಬರಗಾಲ' ಎಂದು ಜನರು ಹೇಳುತ್ತಿದ್ದರೆಂದು ಹೇಳಲಾಗುತ್ತಿದೆ. ಅಂತಹ ಕಷ್ಟಕಾಲದಲ್ಲಿ ಲಕ್ಷಾಂತರ ಜನರು ಅನ್ನವಿಲ್ಲದೆ ಸಾಯುತ್ತಿರುವುದನ್ನು ಕಂಡು ಪುಣ್ಯಾತ್ಮರಾದ ಎಲೆ ಮಲ್ಲಪ್ಪಶೆಟ್ಟರ ಮನಸ್ಸು ಕರಗಿ ಹೋಯಿತು. ಅಂತಹ ಸಂದರ್ಭದಲ್ಲಿ ಕರುಣಾಮಯಿಗಳಾದ ಮಲ್ಲಪ್ಪಶೆಟ್ಟರು ಪ್ರತಿ ದಿವಸವೂ ಲಕ್ಷಾಂತರ ಜನರಿಗೆ ಅನ್ನ ಮತ್ತು ಗಂಜಿಯ ವ್ಯವಸ್ಥೆ ಮಾಡಿ ಹಸಿವನ್ನು ತಣಿಸಿದರಲ್ಲದೆ, ಬಹುಜನರ ಪ್ರಾಣವನ್ನು ಉಳಿಸಿದರು. ಇಂತಹ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಇವರು ತಮ್ಮ ಐಶ್ವರ್ಯವನ್ನೆಲ್ಲಾ ವೆಚ್ಚ ಮಾಡಿ ಎರಡು ವರ್ಷಗಳ ಕಾಲ ನಡೆಸಿದ ಅನ್ನದಾಸೋಹವು ಶ್ಲಾಘನೀಯವಾದುದು. ಆಗ ಮಲ್ಲಪ್ಪಶೆಟ್ಟರು ತೋರಿದ ಉದಾತ್ತಗುಣವನ್ನು ಕಂಡು ಆಗಿನ ಇಂಡಿಯಾ ಸರಕಾರದವರು ಮೆಚ್ಚಿ ೧೮೭೭ನೇ ಇಸವಿ ಜನವರಿ ೧ ರಂದು, ದಾನಶೂರರಾದ ಈ ಮಹನೀಯರಿಗೆ "ರಾವ್‌ಬಹದ್ದೂರ್" ಎಂಬ ಘನವಾದ ಬಿರುದನ್ನು ಕೊಟ್ಟು ಗೌರವಿಸಿದರು.

ಮಲ್ಲಪ್ಪಶೆಟ್ಟರು ಮಾಡಿದ ಅನ್ನದಾನವನ್ನು ನೋಡಿದಾಗ ಶ್ರೀ ಸಿದ್ಧಗಂಗಾ ಮಠದಲ್ಲಿ ೧೯೬೪ರಲ್ಲಿ ನಡೆದ ಘಟನೆ ನೆನಪಿಗೆ ಬರುತ್ತದೆ. ೧೯೬೪ರಲ್ಲಿ ರಾಜ್ಯದಲ್ಲಿ ಎಂದೂ ಕಂಡರಿಯದ ಭೀಕರ ಬರಗಾಲ. ಹಣ ಕೊಟ್ಟರೂ ದವಸ ಧಾನ್ಯ ಸಿಗದ ಪರಿಸ್ಥಿತಿ. ಎಲ್ಲೆಲ್ಲಿ ನೋಡಿದರೂ ಹಾಹಾಕಾರ. ಅನ್ನವಿಲ್ಲದೆ ಜನ ಸಾಯುವ ಸ್ಥಿತಿ. ಆಗ ಸಿದ್ಧಗಂಗಾ ಮಠದ ಸುತ್ತಮುತ್ತಲ ಗ್ರಾಮದ ಜನರು ಶ್ರೀಮಠದತ್ತ ಮುಖಮಾಡಿದರು. ಕರುಣಾಮಹಿಗಳೂ, ಮಾತೃಸ್ವರೂಪರೂ ಆದ ತ್ರಿವಿಧ ದಾಸೋಹಿ ಪರಮಪೂಜ್ಯ





ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಬಂದವರನ್ನು ಶ್ರೀಮಠದ ಆವರಣದಲ್ಲಿ ಸಾಲಾಗಿ ಕೂರಿಸಿ ದಾಸೋಹ ವ್ಯವಸ್ಥೆ ಮಾಡಿದುದು ಶ್ರೀಮಠದ ಇತಿಹಾಸದಲ್ಲಿ ದಾಖಲಿಸುವಂತಹದು. ಮಠದ ಹಿತ ಚಿಂತಕರಿಗೆ, ವಿದ್ಯಾರ್ಥಿಗಳಿಗೆ ತೊಂದರೆಯಾಗುವುದೋ ಎಂಬ ಚಿಂತೆ, ಕಳವಳ. ಈ ವಿಚಾರವನ್ನು ಪರಮಪೂಜ್ಯ ಶ್ರೀಗಳವರ ಗಮನಕ್ಕೆ ತಂದಾಗ ಪೂಜ್ಯರ ಕೊಟ್ಟ ಉತ್ತರ ಪರಮಪೂಜ್ಯರ ಕರುಣೆಯ ಮೇರುಸದೃಶ ವ್ಯಕ್ತಿತ್ವದ ಪರಿಚಯವಾಗುತ್ತದೆ. 'ಬಂದವರು ಅನ್ನವಿಲ್ಲದೆ ಸಾಯಬೇಕೇನು? ಕೊಡುವವನು ಸಿದ್ಧಲಿಂಗ ಇರುವಾಗ ನಮಗೆ ಯಾವ ಚಿಂತೆಯೂ ಇಲ್ಲ' ಎಂದು ಹೇಳುವುದರ ಮೂಲಕ ಸಲಹೆ ನೀಡಿದವರ ಬಾಯಿ ಮುಚ್ಚುವಂತೆ ಮಾಡಿದರು. ಆ ವರ್ಷ ಉತ್ತಮ ಮಳೆ, ಬೆಳೆಯಾಗಿ, ರೈತರು ಬೆಳೆದ ಬೆಳೆಯಲ್ಲಿ ತಾವು ಸ್ವಲ್ಪ ಭಾಗವನ್ನು ತಂದುಕೊಟ್ಟು ಬರಿದಾಗಿದ್ದ ಕಣಜವನ್ನು ತುಂಬುವಂತೆ ಮಾಡಿದರು. ಇದು ಪರಮಪೂಜ್ಯ ಶ್ರೀ ಶ್ರೀಗಳವರ ಮಾನವೀಯತೆಗೆ ಒಂದು ಉಜ್ವಲ ನಿದರ್ಶನ.

ರಾವ್‌ಬಹದ್ದೂರ್ ಎಲೆ ಮಲ್ಲಪ್ಪಶೆಟ್ಟರು ತಾವು ಹುಟ್ಟಿದ ಸಮಾಜಕ್ಕೆ, ದೇಶಕ್ಕೆ, ನಗರಕ್ಕೆ, ವಿಶಿಷ್ಟವಾದ ಅಮೂಲ್ಯ ಸೇವೆ ಸಲ್ಲಿಸಿ, ಬದುಕಿದರೆ ಹೀಗೆ ಬದುಕಬೇಕು ಎಂದು ತೋರಿಸಿಕೊಟ್ಟರಲ್ಲದೆ, ಬೇರೆಯವರಿಗೆ ಮಾರ್ಗದರ್ಶಕ ಹಾಗೂ ಪ್ರೇರಕಶಕ್ತಿಯಾಗಿದ್ದಾರೆ. ಸೇವೆ ಮಾಡುವುದರ ಮೂಲಕ ತಮ್ಮ ಜನ್ಮವನ್ನು ಸಾರ್ಥಕ್ಯ ಪಡಿಸಿಕೊಂಡಿದ್ದಾರೆ. ಇವರು ವೀರಶೈವ ಧರ್ಮದಲ್ಲಿ ಅಚಲವಾದ ನಿಷ್ಠೆಯುಳ್ಳವರಾಗಿದ್ದರು. ಆದರೆ ಎಲ್ಲ ಮತಬಾಂಧವವನ್ನು ಪ್ರೀತಿಯಿಂದ, ಗೌರವದಿಂದ ಕಾಣುತ್ತಿದ್ದರು. ಇವರು ವಿದ್ವಾಂಸರನ್ನು ಅತ್ಯಂತ ಗೌರವದಿಂದ ಸತ್ಕರಿಸುತ್ತಿದ್ದರು. ಗಮಕ ಕಲಾಕೋವಿದರಾದ ಅಭಿನವ ಕಾಳಿದಾಸ ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದ ಬಸವಪ್ಪ ಶಾಸ್ತ್ರಿಗಳನ್ನು ತಮ್ಮ ಮನೆಗೆ ಬರಮಾಡಿಕೊಂಡು ಅವರಿಂದ ಕಾವ್ಯವಾಚನ ಮಾಡಿಸಿ ಒಂದು ಸಾವಿರ ರೂಪಾಯಿಗಳ ಸಂಭಾವನೆಯನ್ನು ಕೊಟ್ಟು ಸತ್ಕರಿಸಿದರೆಂಬುದೇ ಸಾಕ್ಷಿಯಾಗಿದೆ.

ಬೆಂಗಳೂರು ನಗರದಲ್ಲಿ ಹಲವು ಪ್ರಾಚೀನ ದೇವಾಲಯಗಳಿದ್ದು, ಅವುಗಳಲ್ಲಿ ಪ್ರಮುಖವಾದವುಗಳೆಂದರೆ ದೊಡ್ಡ ಬಸವೇಶ್ವರ, ಗವಿಗಂಗಾಧರೇಶ್ವರ, ಪ್ರಳಯಕಾಲದ ರುದ್ರ ದೇವಾಲಯ, ಬೆಳ್ಳಿ ಬಸವೇಶ್ವರ ದೇವಸ್ಥಾನ, ಅಲಸೂರು ಸೋಮೇಶ್ವರ ಮತ್ತು ಕಾಡುಮಲ್ಲೇಶ್ವರ ದೇವಾಲಯ. ಈ ಎಲ್ಲಾ ದೇವಾಲಯಗಳ ಅಭಿವೃದ್ಧಿಗೆ ಎಲೆ ಮಲ್ಲಪ್ಪಶೆಟ್ಟರ ನಿಷ್ಕಾಮ ಸೇವೆ ಸಂದಿದೆ. ಎಲೆ ಮಲ್ಲಪ್ಪಶೆಟ್ಟರು ಎಪ್ಪತ್ತೆರಡು ವರ್ಷಗಳ ಸಾರ್ಥಕ ಜೀವನ ನಡೆಸಿ, ೧೮೦೯ನೇ ಸರ್ವಜಿತು ಜ್ಯೇಷ್ಠ ತದಿಗೆಯಂದು ಶಿವಸಾಯುಜ್ಯ ಹೊಂದಿದರು. ಅವರಿಂದು ಭೌತಿಕವಾಗಿ ನಮ್ಮ ಮುಂದೆ ಇಲ್ಲದೆ ಹೋದರೂ ಅವರು ಮಾಡಿದ ಸತ್ಕಾರ್ಯಗಳು ಬೆಂಗಳೂರು ನಗರದ ಜನರ ಹೃದಯದಲ್ಲಿ ವಿಶೇಷ ಸ್ಥಾನ ಪಡೆದಿದ್ದಾರೆ.

■

ಆಶೆಯನ್ನು ಕಡಿದೊಗೆ, ಕ್ಷಮೆಯನ್ನು ತಳೆ, ಸೊಕ್ಕನ್ನು ಬಿಡು, ಪಾಪಕಾರ್ಯದಲ್ಲಿ ಮನಸ್ಸು ಹಾಕಬೇಡ, ಸತ್ಯವನ್ನು ನುಡಿ, ಸಜ್ಜನರ ದಾರಿಯಲ್ಲಿ ಕ್ರಮಿಸು, ವಿದ್ವಾಂಸರ ಸೇವೆಗೈ, ಹಿರಿಯರನ್ನು ಗೌರವಿಸು, ಶತ್ರುಗಳನ್ನೂ ಮರ್ಯಾದಿಸು, ನಿನ್ನ ಗುಣಗಳನ್ನು ಮುಚ್ಚಿಡು, ಕೀರ್ತಿಯನ್ನು ಕಾಯ್ದುಕೋ, ದುಃಖಿತರಲ್ಲಿ ದಯೆದೋರು – ಇವೆಲ್ಲ ಸಜ್ಜನರ ಲಕ್ಷಣಗಳು.

**– ನೀತಿಶತಕ**

ಕೈಗೆ ದಾನವು ಆಭರಣ, ಸತ್ಯವನ್ನು ನುಡಿಯುವುದೇ ಕೊರಳ ಆಭರಣ. ಕಿವಿಗೆ ಶಾಸ್ತ್ರವೇ ಆಭರಣ. ಉಳಿದ ಸಾಮಾನ್ಯ ಆಭರಣಗಳನ್ನು ತೆಗೆದುಕೊಂಡು ಮಾಡುವುದೇನು?

**– ಸುಭಾಷಿತಾವಲಿ**

ಗಿಡಗಳು ಬೇರೆಯವರಿಗೆ ನೆರಳು ಕೊಟ್ಟು ಸ್ವತಃ ತಾವು ಬಿಸಿಲಿನಲ್ಲಿ ನಿಲ್ಲುತ್ತವೆ. ತಮ್ಮ ಹಣ್ಣುಗಳನ್ನು ಕೂಡ ಹೆರವರಿಗೆ ಕೊಡುವವು. ಸತ್ಪುರುಷರು ಈ ಗಿಡಗಳೋಪಾದಿಯಾಗಿ ಪರರ ಕಲ್ಯಾಣಕ್ಕಾಗಿ ಆತ್ಮಾರ್ಪಣೆ ಮಾಡುವರು.

**– ವಿಕ್ರಮ ಚರಿತ**





ಲೇಖನ

# ಸಂಸಾರ

– ಕೆ.ಸಿ. ಶಿವಪ್ಪ, ಸಾಹಿತಿ, ಮೈಸೂರು

**ಸಂಸಾರವೆಂಬುದೊಂದು ಗಾಳಿಯ ಸೊಡರು**
**ಕಾಲಲಿ ಕಟ್ಟಿದ ಗುಂಡು, ಕೊರಳಲಿ ಕಟ್ಟಿದ ಬೆಂಡು,**
**ತೇಲಲೀಯದು ಗುಂಡು, ಮುಳುಗಲೀಯದು ಬೆಂಡು,**
**ಇಂತಪ್ಪ ಸಂಸಾರಶರಧಿಯ ದಾಂಟಿಸಿ**
**ಕಾಲಾಂತಕನೆ ಕಾಯೋ, ಕೂಡಲಸಂಗಯ್ಯಾ.**

– ಬಸವಣ್ಣ

ಸಾಧಕ ಕೈಗೊಳ್ಳುವ ಸಾಹಸಯಾತ್ರೆಯ ವಿವಿಧ ಹಂತಗಳನ್ನು ವಚನಸಾಹಿತ್ಯ ಬಿಡಿಬಿಡಿಯಾಗಿ ವಿವರಿಸಿದೆ. ಸಂಸಾರದ ನಿಸ್ಸಾರತೆ-ನಶ್ವರತೆ ಕುರಿತು ವಚನಕಾರರು ಸುಂದರ ಸಾದೃಶ್ಯಗಳ ಮೂಲಕ ಮನಮುಟ್ಟುವ ರೀತಿಯಲ್ಲಿ ನಿರೂಪಿಸಿದ್ದಾರೆ.

ಸಂಸಾರವೆಂಬುದೊಂದು ರಾಹು. ಇದು ಯಾರನ್ನು ಯಾವಾಗ ನುಂಗುತ್ತದೊ! 'ಇದರ ಬಾಯೊಳಗಣಿಂದ ಎನ್ನ ಕಡೆಗೆ ತೆಗೆದು ಕಾಯಯ್ಯಾ' ಎಂದು ಸಿದ್ಧರಾಮ ನುಡಿದರೆ, ಇದೇ ಭಾವನೆಯನ್ನು ಬಸವಣ್ಣ 'ಕಪ್ಪೆ ಸರ್ಪನ ನೆರಳಳ್ಲಿಪ್ಪಂತೆ ಎನಗಾಯಿತ್ತಯ್ಯಾ. ಅಕಟಕಟಾ, ಸಂಸಾರ ವೃಥಾ ಹೋಯಿತ್ತಲ್ಲಾ ಇವ ತಪ್ಪಿಸಿ ಎನ್ನ ರಕ್ಷಿಸಯ್ಯಾ' ಎನ್ನುತ್ತಾನೆ. ಸಂಸಾರಸಾಗರದ ತೆರೆ ಕೊಬ್ಬಿ ಮುಖದ ಮೇಲೆ ಅಲೆವುತ್ತಿದೆ; ಇದು ಉರದುದ್ದ, ಕೊರಳುದ್ದ, ಶಿರದುದ್ದ. ಇಲ್ಲಿ ಸಿಲುಕಿ ಮನುಜರ ಅವಸ್ಥೆ ನಾಯಿಪಾಡು. ಇಲ್ಲಿ ಆರಿಗಾರೂ ಇಲ್ಲ, ಕೆಟ್ಟವಂಗೆ ಕೆಳೆಯಿಲ್ಲ. ಇದನ್ನರಿತರೂ ಮನುಷ್ಯರು ಬದುಕುವ ಬಗೆಯೇ ವಿಚಿತ್ರ. ಚೆನ್ನಬಸವಣ್ಣ ಗುಬ್ಬಿಗೆ ಈ ಪ್ರವೃತ್ತಿಯನ್ನು ಹೋಲಿಸಿ ಹೀಗೆನ್ನುತ್ತಾನೆ:

**ಗುಬ್ಬಿ ಹೆರರ ಮನೆಯ ತನ್ನ ಮನೆ ಎಂಬಂತೆ**
**ಧರೆ ಧನ ವನಿತೆಯರು ಎನ್ನುವರು ತನ್ನವರೆಂದು**
**ಹೋರಿ ಹೋರಿ ಸಾಯುತ್ತದೆ ಜೀವ.**

ಇನ್ನೊಬ್ಬರ ಮನೆಯಂಗಳದಲ್ಲಿ ಕಟ್ಟಿದ ಗೂಡನ್ನೇ ಈ ಗುಬ್ಬಿ ತನ್ನದೆಂದು ನೆನೆಯುತ್ತದೆ; ಇದೇ ತನ್ನ ನಿಜಮನೆಯೆಂದು ಭಾವಿಸುತ್ತದೆ. ಅಂತೆಯೇ ಈ ಜೀವದ ವ್ಯವಹಾರ-ವ್ಯಾಪಾರ. ಈ ನೆಲ, ಈ ಹಣ,ಈ ಹೆಣ್ಣು ತನ್ನವರೆಂದುಕೊಂಡು ಸತ್ತು ಸತ್ತು ಸುಣ್ಣವಾಗುತ್ತದೆ. ನಶ್ವರತೆಯ ಅರಿವೇ ಇದಕ್ಕಿಲ್ಲ.

**ಸಂಸಾರ ಪಂಜರ**

ಈ ಪ್ರಪಂಚವೊಂದು ಪಂಜರ. ಸಂಸಾರವೆಂಬುದೊಂದು ಚಕ್ರ. ಹೆಣ್ಣು ಹೊನ್ನು ಮಣ್ಣನ್ನೆ ಪ್ರಾಣವೆಂದು ನಂಬಿ, ಆ ಸುಖದ ಸೊಕ್ಕಿನಲ್ಲಿ ಸುಳಿದಾಟ. ಈ ಅನಿಸಿಕೆಯನ್ನೇ ಹೋಲುವ ಇನ್ನೊಂದು ವಚನ:

**ಇಲಿಗಡುಹನೊಡ್ಡಿದಲ್ಲಿ ಇಪ್ಪಂತೆ ಎನ್ನ ಸಂಸಾರ,**
**ತನು ಕೆಡವನ್ನಕ್ಕ ಮಾಣದು.**
**ಹೆರರ ಬಾಧಿಸುವುದು ತನು ಕೆಡವನ್ನಕ್ಕ ಮಾಣದು.**
**ಹೆರರ ಭಿದ್ರಿಪುದನು ಮನ ಕೆಡವನ್ನಕ್ಕ ಮಾಣದು.**

ಇಲಿ ಒಂದು ಚೂರು ರೊಟ್ಟಿಗಾಗಿ ಆಸೆಪಟ್ಟು ತನ್ನ ಅಸುನೀಗಿಕೊಳ್ಳುವಂತೆ ಮನುಜನ ಗತಿ. ಬೋನಿನಿಂದ ಹೊರಬರುವಂತಿಲ್ಲ. ಅಂಥ ಕೆಟ್ಟ ಪರಿಸ್ಥಿತಿ. ಕಪ್ಪೆ ಹಾವಿನ ನೆರಳಿನಲ್ಲಿರುವಂಥ, ಹರಕೆಗೆ ತಂದ ಕುರಿ ತೋರಣಕ್ಕೆ ಕಟ್ಟಿದ ತಳಿರ ಮೇಯುವಾಸೆಯಂಥ, ಸರ್ಪದ ಬಾಯಿಗೆ ಸಿಲುಕಿದ ಕಪ್ಪೆ ಹಾರುವ ನೊಣ ನೋಡಿ ಆಸೆಪಡುವಂಥ ದುಸ್ಥಿತಿ ಇದು.





ಸಂಸಾರದ ಅನಿತ್ಯತೆಯನ್ನು ಹೀಗೆ ವಚನಕಾರರು ತುಂಬ ಮಾರ್ಮಿಕವಾಗಿ ಬಣ್ಣಿಸಿದ್ದಾರೆ. ಸಂಸಾರವನ್ನು ಗಾಳಿಯ ಸೊಡರಿಗೆ ಹೋಲಿಸಿ, ಸಿರಿ ಎಂಬುದೊಂದು ಸಂತೆ ಎನ್ನುತ್ತಾರೆ. ಇದನ್ನು ನಚ್ಚಿದವರಿಗೆ ಕೇಡು ತಪ್ಪದೆಂಬ ಎಚ್ಚರಿಕೆಯ ಗಂಟೆ ಬಾರಿಸುತ್ತಾರೆ.

ಸಂಸಾರವನ್ನು ಅಟ್ಟಡವಿಯೊಂದಿಗೆ ಸಮೀಕರಿಸಿ, ಅಲ್ಲಿನ ಬಳಲಿಕೆಯನ್ನು ತಿಳಿಸುವ ವಚನ ಹೀಗೆ:

**ಸಂಸಾರವೆಂಬ ಮಹಾಘೋರಾರಣ್ಯದಲ್ಲಿ**
**ಹೊಲಬುದಪ್ಪಿ ಬಳಲುತ್ತಿದ್ದಾರೆ ನೋಡಯ್ಯ.**
**ಇರುಳು ಹಗಲೆನ್ನದೆ ಸಂಸಾರದಲ್ಲಿ ಸಾವುತ್ತಿದ್ದಾರೆ**
**ನೋಡಯ್ಯಾ.**

ಸಂಸಾರವೆಂಬ ಮಹಾವ್ಯಾಧಿ ಕಾಡತೊಡಗಿದಾಗ, ಮುಂದೆ ಸತ್ಪಥದಲ್ಲಿ ಅಡಿಯಿಡಲು ಶಕ್ತಿ ಕುಂದುತ್ತದೆ. ಅಧಮಗುಣ ಆವರಿಸುತ್ತದೆ. ಭವದ ಕುಣಿಕೆ ಇರುವವರೆಗೆ ಭವ ಬೆನ್ನಬಿಡದು. ಆದ್ದರಿಂದ ಸ್ವತಂತ್ರ ಸಿದ್ಧಲಿಂಗ ಬೇಡುವ ಪರಿಯೆಂದರೆ-

**ನೀನೇ ಶ್ರೀಗುರುವೆಂಬ ವೈದ್ಯನಾಗಿ ಬಂದು,**
**ಕೃಪಾಪ್ರಸಾದವೆಂಬ ಮದ್ದು ಕೊಟ್ಟು,**
**ಪಂಚಾಕ್ಷರಿಯೆಂಬ ಪಥ್ಯವನೆರೆದು,**
**ಸಂಸಾರವ್ಯಾಧಿಯ ಮಾಣಿಸಯ್ಯ ನಿಮ್ಮ ಧರ್ಮ.**

ಸಂಸಾರವೆಂಬ ಬಲೆಯಲ್ಲಿ ಸಿಲುಕಿ ಒದ್ದಾಡುವ ಮನಸ್ಸು ಹುರುಳಿಲ್ಲದ ಸಾಂಸಾರಿಕ ಬದುಕಿನ ಗೋಳನ್ನು ಕುರಿತು ಪರಿಪರಿಯಾಗಿ ಚಿಂತಿಸುತ್ತದೆ. ಈ ಚಿಂತೆಯ ಚಿತ್ರವಾದರೂ ಎಂಥದು? ಬಡತನ ಕಾಡಿದರೆ ಅನ್ನದ ಚಿಂತೆ. ಅನ್ನ ದೊರಕಿದರೆ ತೊಡಿಗೆಯ ಚಿಂತೆ. ಉಡುಮ ಸಿಕ್ಕಿದರೆ ಹೆಂಡತಿಯ ಚಿಂತೆ. ಪತ್ನಿ ತನ್ನವಳಾದರೆ ಮಕ್ಕಳ ಚಿಂತೆ. ಬದುಕು ಹಸನಾದರೆ ಕೇಡಿನ ಚಿಂತೆ. ಕೇಡು ಒದಗಿದರೆ ಮರಣದ ಚಿಂತೆ. ಹೀಗೆ ಮುಗಿಯದ ಚಿಂತೆಗಳ ಸರಮಾಲೆ. ಇಷ್ಟಾದರೂ, ಶಿವನ ಚಿಂತೆ ಇಲ್ಲವೇ ಇಲ್ಲ. ಹೀಗೇಕೆಂಬುದೇ ಅಂಬಿಗರ ಚೌಡಯ್ಯನ ಚಿಂತೆ!

**ವಿಷಯ ಸುಖ-ಆಸೆ**

ವಿಷಯಸುಖಕ್ಕೆ ಆತುರ ಪಡುವ ಮನುಜನೊಬ್ಬನ ದುಃಖದ ಕತೆಯನ್ನು ವಚನಕಾರನೊಬ್ಬ ಚೆಂದ ಬಗೆಯಲ್ಲಿ ಚಿತ್ರಿಸಿದ್ದಾನೆ. ಕಾಡುಗಿಚ್ಚು ಹುಲಿ ಕಾಡಾನೆಗಳಿಗೆ ಹೆದರಿ ಬೇರೆ ದಾರಿಯಿಲ್ಲದೆ ಬಾವಿಯ ಕಾಣುತ್ತಾನೆ ಒಬ್ಬಾತ. ತಲೆಯನೂರಿ ಬೀಳುವ ಹೊತ್ತಿನಲ್ಲಿ ಹಾವನ್ನು ಕಾಣುತ್ತಾನೆ. ಇಲಿ ಕಡಿದ ಬಳ್ಳಿಯನ್ನು ಆಗ ಹಿಡಿದು ನಿಲ್ಲುತ್ತಾನೆ. ಜೇನುಹುಳುವೊಂದು ಮೈಯನೂರುತ್ತದೆ. ಮೂಗಿನ ತುದಿಯ ಮೇಲೆ ಮಧುವಿನ ಹನಿಯೊಂದು ಬಂದು ಬೀಳುತ್ತದೆ. ತನ್ನೆಲ್ಲ ದುಃಖದ ಪರಿವೆಯನ್ನು ಮರೆತು, ಸೈರಿಸಿಕೊಂಡು ಈತ ನಾಲಗೆಯ ತುದಿಯಲ್ಲಿ ಆ ಮಧುವಿನ ರುಚಿಯನ್ನು ಸವಿಯತೊಡಗುತ್ತಾನೆ. ಇದು ಸಂಸಾರಸುಖ, ದುಃಖದಾಗರ.

ಇನ್ನು ಆಸೆಯ ವಿಚಾರ. ಆಸೆ ಎಂಬವಳು ಆರನಾದಡೆಯೂ ತನ್ನತ್ತ ಎಳೆವಳು. ಆಸೆ ಆಮಿಷ ಮಮಕಾರದ ಸೆಳೆತ ಯಾರನ್ನು ಬಿಡದು. 'ಅಶನಕ್ಕಾಗಿ ಮಣ್ಣ ಮೆಚ್ಚಿ, ವ್ಯಸನಕ್ಕಾಗಿ ಹೆಣ್ಣ ಮೆಚ್ಚಿ, ಅಂಗಸುಖಕ್ಕಾಗಿ ಹೊನ್ನ ಮೆಚ್ಚಿ' ಮತಿಗೆಟ್ಟು ಮುಂದುಕಾಣದ ಪರದಾಟ ಅಷ್ಟಿಷ್ಟಲ್ಲ.

ಸಂಸಾರವೆಂಬ ಕಾನನದಲ್ಲಿ ಆಸೆಯೆಂಬ ಹುಲಿ ಬಂದು ಹಿಡಿದಿದೆ. ಇದನ್ನು ಕೊಲ್ಲುವುದು ಹೇಗೆ? ದೇವನ ಮಹಾಜ್ಞಾನ ಶಸ್ತ್ರವೊಂದೇ ಕಾಪಾಡ ಬಲ್ಲದು, ಬದುಕಿಸಬಲ್ಲದು. ಪಂಚೇಂದ್ರಿಯ ವಿಷಯ ದಿಂದಾಗುವ ತೊಂದರೆ ತುಮಲ ಅಸದಳ. ಇದೊಂದು ಹೆಮ್ಮಾರಿಯ ಬಾಯಿ. ಒಮ್ಮೆ ಈ ಮೋಹದ ಸೀರೆಯ ಸೆರಗಿಗೆ ಸಿಲುಕಿದರಂತೂ ಅತಿ ದಾರುಣ. ಅದು ಭಾನುವಿನ ಕಿರಣದಲ್ಲಿ ಬಾಡಿದ ಕಮಲದಂತೆ. ಗಾಳಿಗೆ ಉಲಿವ ತರಗೆಲೆಯಂತೆ. ಸಂಸಾರವೆಂಬ ಸುಂಟರಗಾಳಿ ಯಾರನ್ನಾದರೂ ಆಕಾಶಕ್ಕೆ ಏರಿಸಿ, ಮತ್ತೆ ಭೂಮಿಗೆ ಎಸೆದುಬಿಡುತ್ತದೆ.

ಘ್ರಾಣೇಂದ್ರಿಯ ವಿಷಯದಿಂದ ಸಂಪಿಗೆ ಹೂವಿನಲ್ಲಿ ಭ್ರಮರ ಕೆಟ್ಟರೆ, ರಸನೇಂದ್ರಿಯ ವಿಷಯದಿಂದ ಜಾಲಗಾರನ ಬಲೆಯಲ್ಲಿ ಮೀನು ಕೆಡುತ್ತದೆ. ನಯನೇಂದ್ರಿಯ ವಿಷಯದಿಂದ ದೀಪದ ಜ್ವಾಲೆಯಲ್ಲಿ ಪತಂಗ ಕೆಟ್ಟರೆ, ತ್ವಗೀಂದ್ರಿಯ ವಿಷಯದಿಂದ ಬೇಟೆಗಾರನ ಬಾಣದಲ್ಲಿ ಜಿಂಕೆ ಕೆಡುತ್ತದೆ. ಒಂದೊಂದು ವಿಷಯದಿಂದ ಒಂದೊಂದು ಪ್ರಾಣಿಗೆ ಬಂಧನ, ಆಘಾತ. ಇನ್ನು ಐದೂ ಇಂದ್ರಿಯಲಂಪಟರಾದ ಮನುಜರು ಕೆಟ್ಟು ಕಂಗೆಡುವ ಕೇಡು ವರ್ಣನಾತೀತ.

ಮಡದಿ ಮಕ್ಕಳು ದ್ರವ್ಯ ಒಡವೆ ಇವೆಲ್ಲ 'ನೀವು ಮಡಿದು ಹೋಗುವಾಗ ನಿಮ್ಮೊಡನೆ ಬಪ್ಪವೇ ಹೇಳಿರೋ!' ಎಂದು ಕೇಳುವ ವಚನಕಾರನ ಪ್ರಶ್ನೆಗೆ ಉತ್ತರವಾದರೂ ಎಲ್ಲಿದೆ?







ಈ ಸಂಸಾರದಂದುಗಕ್ಕೆ ಕಾರಣವಾದ ಈ ದುಃಖನಿವಾರಣೆಗೆ ಹಿತನುಡಿ ಎಂದರೆ:

**ಹೊನ್ನು ಹೆಣ್ಣು ಮಣ್ಣಿಗೆರಗದುದೆ ಬಾಳು.**
**ಸಕಲ ವಿಷಯದ ದಾಳಿಗೆ ಸಿಲುಕದುದೆ ಬಾಳು.**
**ಇದಲ್ಲದೆ ಗತಿಗೆಟ್ಟು, ಧಾತುಗೆಟ್ಟು,**
**ವೃಥಾ ಬೋಳಾದ ಬಾಳು**
**ಲೋಕದ ಗೋಳಲ್ಲವೆ ಹೇಳಾ.**
**ಮಾಯಾವಿಲಾಸ.**

ಮಾಯಾಲೋಕದ ಗತಿವಿಧಿಯೇ ವಿಚಿತ್ರ. ಹುಸಿಯ ಆಶೆಯನ್ನು ಹಿಡಿದು ನಡೆವ ಮಾನವರನ್ನು ಮಾಯೆ ದೆಸೆದೆಸೆಗೆ ಎಳೆದು ಕುಸಿದು ಬೀಳಿಸುತ್ತದೆ; ಕೆಡವಿ ಅಟ್ಟಹಾಸಗೈಯುತ್ತದೆ. 'ಮಾಯಾಮಂಜರ ಕೊಲುವಡೆ ಓ ಗಿಣಿಯೆ, ನಿನ್ನ ಹಂಜರ ಕಾವುದೆ?' ಮನುಜ ತಾನೊಂದ ನೆನೆದರೆ, ಮಾಯೆ ತಾನೊಂದ ನೆನೆಯುತ್ತದೆ. ಬಳಲಿಸಿ ಕಾಡುತ್ತದೆ, ಮುಂಗೆಡಿಸಿ ಪಥಭ್ರಷ್ಟನನ್ನಾಗಿ ಮಾಡುತ್ತದೆ. ಈ ಮಾಯೆಯೆಂಬ ರಾಕ್ಷಸಿಯ ಬಲೆಯಲ್ಲಿ ಸಿಲುಕಿದರೆ, ಸ್ಥಿರತೆ ಮುಗ್ಗರಿಸಿದಂತೆ. ಅದು 'ಪಂಕದಲ್ಲಿ ಬಿದ್ದ ಪಶುವಿನಂತೆ, ಕಿರಾತನ ಕೈಯ ಮೃಗದಂತೆ, ಗರುಡನ ಮುಂದಿನ ಸರ್ಪದಂತೆ, ಸಿಂಹದ ಮುಂದಣ ಕರಿಯಂತೆ, ದೀಪದ ಮುಂದಣ ಪತಂಗದಂತೆ.'

**ಸಿದ್ಧರಾಮನ ದೃಷ್ಟಿಯಲ್ಲಿ ಯಾವುದು ಮಾಯೆ?**
**ಯೋಗಿಗೆ ಕೋಪವೆ ಮಾಯೆ;**
**ರೋಗಿಗೆ ಅಪಥ್ಯವೆ ಮಾಯೆ;**
**ಜ್ಞಾನಿಗೆ ಮಿಥ್ಯವೆ ಮಾಯೆ**
**ಅರಿದೆನೆಂಬವಂಗೆ ನಾನು-ನೀನೆಂಬುದೆ ಮಾಯೆ.**

ಮಾಯೆ ಕಾಡುವ ವಿಧಾನವಾದರೂ ಹೇಗೆ? ಅಕ್ಕ ಹೇಳುವಂತೆ – ಕಾಯಕ್ಕೆ ಅದು ನೆಳಲು; ಪ್ರಾಣಕ್ಕೆ ಮನಸ್ಸು; ಮನಸ್ಸಿಗೆ ನೆನಹು; ನೆನಹಿಗೆ ಅರಿವು; ಅರಿವಿಗೆ ಮರಹು. ಪುರುಷನ ಮುಂದೆ ಸ್ತ್ರೀಯಾಗಿ, ಸ್ತ್ರೀ ಮುಂದೆ ಪುರುಷನಾಗಿ ಈ ಅಭಿಮಾನ ಕಾಡುತ್ತದೆ. ಯೋಗಿಗೆ ಯೋಗಿಣಿಯಾಗಿ, ಸವಣನಿಗೆ ಸವಣಿಯಾಗಿ, ಯತಿಗೆ ಪರಾಕಿಯಾಗಿ ಬೆಂಬತ್ತಿ ಬರುತ್ತದೆ. ಹೀಗೆ, 'ಜಗದ ಜಂಗುಳಿಗೆ ಬೆಂಗೋಲನೆತ್ತಿ ಕಾಡಿತ್ತು ಮಾಯೆ'. ಆದರೆ, 'ಚೆನ್ನಮಲ್ಲಿಕಾರ್ಜುನನೊಲಿದ ಶರಣಂಗೆ ಮಾಯೆಯಿಲ್ಲ, ಮರಹಿಲ್ಲ, ಅಭಿಮಾನವೂ ಇಲ್ಲ'.

'ಎಳ್ಳಿಗೆ ಎಣ್ಣೆಯಾಗಿ, ಮುಳ್ಳಿಗೆ ಮೊನೆಯಾಗಿ, ಹೂವಿಗೆ ಗಂಧವಾಗಿ, ಅವರವರಂಗದಲ್ಲಿ ಹಿಂಗದ ಪ್ರತಿರೂಪಾಗಿ ಸಂದಿಲ್ಲದೆ ಕಾಡಿತ್ತಿದ್ದಾಳೆ ಮಾಯೆ'. 'ಮಣ್ಣೆಂಬುದು ದೇಹ, ಹೊನ್ನೆಂಬುದು ಕಾಂಕ್ಷೆ, ಹೆಣ್ಣೆಂಬುದು ಸಕಲ ಸುಖಭೋಗಂಗಳು'. ಕಾಮ ಕ್ರೋಧಾದಿ ಅರಿಷಡ್ವರ್ಗಗಳನ್ನು ಬಳಸಿಕೊಂಡು ಮಾಯೆಯೆಂಬ ರಕ್ಕಸಿ 'ಸಕಲ ಪ್ರಾಣಿಗಳ ಸಾರವ ಹೀರಿ ಹಿಪ್ಪೆಯ ಮಾಡಿ ಉಃಫೆಂದು ಊದುತ್ತಿದ್ದಾಳೆ'. ಆಸೆಯೆಂಬುದು ಯಾರಾರನ್ನು ಕೆಡಿಸದಯ್ಯಾ? ಈ ಮೂರಾಸೆಗೆ ಆಸೆಗೈದು ಮಡಿದವರು ಕೋಟಿಕೋಟಿ. ಆದ್ದರಿಂದ ಸ್ವತಂತ್ರ ಸಿದ್ಧಲಿಂಗನ ಮೊರೆಯೆಂದರೆ–

**ಈ ಪರಿಯ ಬಾಧೆಯಲ್ಲಿ ಬಳಲುತ್ತಿದೆ ಜಗವೆಲ್ಲ.**
**ನಿನ್ನವರನು ಈ ಮಾಯಾಸಂಸಾರದ ಬಾಧೆಯಲ್ಲಿ**
**ಬಳಲದಂತೆ ಮಾಡಯ್ಯ**

ಲೌಕಿಕ ಸುಖಗಳಿಂದಾಗುವ ದುರವಸ್ಥೆ, ಸಂಸಾರ ಸುಳಿಯ ಚಿಂತೆಕಾರಕ ಕಳವಳ, ಮಾಯಾವಿಲಾಸ, ಬದುಕಿನ ನಶ್ವರತೆ ಮುಂತಾದ ಸಂಗತಿಗಳನ್ನು ಶರಣರು 'ಸಂಸಾರಹೇಯಸ್ಥಲ' ಎಂಬ ಅಡಿಯಲ್ಲಿ ವಿವೇಚಿಸಿದ್ದಾರೆ. ಈ ಬಗೆಯ ತಳಮಳ ತಲ್ಲಣ ಸೂಸುವ ವಚನಗಳು ಮನಸ್ಸಿನ ಚಂಚಲತೆಯತ್ತ ಬೆಳಕು ಬೀರುತ್ತವೆ. ತದನಂತರ ಶರಣಾಗತಿಯತ್ತ ಮನವಾಲುವ ಹಂಬಲದ ಬಗೆಯನ್ನು ಚಿತ್ರಿಸುತ್ತವೆ.

ಸಂಸಾರಚಕ್ರದಲ್ಲಿ ಸಿಲುಕಿ ತೊಳಲುತ್ತಿರುವವರಿಗೆ ಸ್ವರೂಪಜ್ಞಾನದ ಮನವರಿಕೆಯಾದರೂ ಹೇಗಾದೀತು? ಸಂಸಾರದ ತೋರಿಕೆ ನಿತ್ಯವೆಂದು ನಂಬಿದಾಗ ಮರವೆ. ಅದರ ನಿಜನಿಲುವನ್ನು ಅರಿಯುವ ದಿಸೆಯಲ್ಲಿ ಗುರುಕರುಣೆಯ ಪಾತ್ರ ಮಹತ್ವದ್ದು. ಈ ನಿಟ್ಟಿನಲ್ಲಿ ಸಾಧನೆ ಸಿದ್ಧಿಸಿದರೆ, ಮನತಾಮಸ ತಾನೇ ನಿರಸವಾಗುತ್ತದೆ; ಮನಶ್ಶುದ್ಧಿ ಲಭಿಸುತ್ತದೆ.

ಮಾಯೆಯ ಪರದೆ ಅತ್ತ ಸರಿದು ನಿಂತರೆ, ನಿಜದ ಬೇರು ಚಿಗುರೊಡೆಯುತ್ತದೆ, ಪಲ್ಲವಿತ ನೆಲೆ ಪ್ರತ್ಯಕ್ಷವಾಗುತ್ತದೆ. ಈ ನಿಜಸ್ವರೂಪವೇ ಸತ್ಯ; ಇದೇ ಪರತತ್ವ. ಜೀವಾತ್ಮ ಅವಿದ್ಯೆಯ ಸಂಕೋಲೆಯಿಂದ ಹೊರಬರಬೇಕಾದರೆ, ಸಂಸಾರಚಕ್ರದ ಸುಳಿಯಿಂದ ಪಾರಾಗಬೇಕಾದರೆ, ಅದು ತನ್ನ ಮೂಲಸ್ವರೂಪವನ್ನು ಅಮೂಲಾಗ್ರವಾಗಿ ಅರಿಯಬೇಕಾಗುತ್ತದೆ.

**ಭಾವಸಂಗವನರಿದ ಬಳಿಕ**
**ಮಾಯಾಮೋಹ ವಿಷಯ ಭ್ರಾಂತಿನ ಸುಳುಹುಂಟೆ?**

(ಕೃಪೆ: ಧಾರಿಣಿ)







ಲೇಖನ

# ವಚನಗಳಲ್ಲಿ ನಾರೀಶಕ್ತಿಯ ಚಿತ್ರಣ

– ಡಾ. ವೇದಾವತಿ.ಎಸ್ *

ಕರ್ನಾಟಕದ ಇತಿಹಾಸದಲ್ಲಿ ಶಿವಶರಣರ ಚಳವಳಿ ಅಪೂರ್ವ ಘಟನೆಯಾಗಿದ್ದು, ಜನಸಾಮಾನ್ಯರಿಂದ ಆದ ವಚನಗಳ ಸೃಷ್ಟಿಯು ಅನನ್ಯ ಪ್ರಯೋಗವಾಗಿದೆ. 'ವಚನ' ಎಂಬ ಪದಕ್ಕೆ ಪ್ರತಿಜ್ಞೆ ಅಥವಾ ಆತ್ಮಸಾಕ್ಷಿಯ ಮಾತು ಎಂಬ ಅರ್ಥವಿದೆ. ಜನರು ತಮ್ಮ ನಡೆಯಂತೆ ನುಡಿವ ಆತ್ಮಸಾಕ್ಷಿಯ ವಾಣಿಗಳು ವಚನಗಳಾಗಿ ಪ್ರಸಿದ್ಧವಾದವು. ಅನುಭಾವಿಗಳು ತಮ್ಮ ಚಿಂತನೆಯನ್ನು ಬಿಡಿಮಾತುಗಳ ಮೂಲಕ ಹೇಳುತ್ತಾರೆ. ಈ ಶಿವಶರಣ ಅನುಭಾವಿಗಳ ಪೈಕಿ ಅನೇಕ ಮಹಿಳೆಯರು ತಮ್ಮತಮ್ಮದೇ ಆದ ಪ್ರಭಾವ ಬೀರಿರುವುದು ಗಮನಾರ್ಹ. ಶಿವಶರಣರ ಕಾಲಘಟ್ಟದಲ್ಲಿ ಹಲವು ಮಹಿಳೆಯರು ತಮ್ಮ ಆತ್ಮಸಾಕ್ಷಿಯ ನುಡಿಗಳ ಮೂಲಕ ಸಾಹಿತ್ಯದ ಮುಖ್ಯ ಘಟ್ಟವೊಂದರ ಭಾಗವಾಗಿರುವುದು ಕನ್ನಡದ ಇತಿಹಾಸದ ಹೆಮ್ಮೆಯಾಗಿದೆ.

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಿಸಿರುವ ಸಮಗ್ರ ವಚನ ಸಾಹಿತ್ಯದ ಐದನೆಯ ಸಂಪುಟವನ್ನು ಪ್ರತ್ಯೇಕವಾಗಿ ಶಿವಶರಣೆಯರ ವಚನ ಸಂಪುಟವಾಗಿ ರೂಪಿಸಿದ್ದು, ಇದರಲ್ಲಿ ೩೩ ಶಿವಶರಣೆಯರ ೧೧೦೪ ವಚನಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ೧೨ನೆಯ ಶತಮಾನದಲ್ಲಿ ಅನೇಕ ಮಹಿಳೆಯರು ಶಿವಶರಣೆಯರಾಗಿ ತಮ್ಮ ನಿತ್ಯದ ಬದುಕನ್ನು ವಚನಗಳ ಮೂಲಕ ದಾಖಲಿಸುವಲ್ಲಿ ತೊಡಗಿದ್ದರೆಂಬುದು ಮುಖ್ಯ ಸಂಗತಿಯಾಗಿದೆ.

ದ್ರಾವಿಡ ಸಂಸ್ಕೃತಿಯ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣು ಗೌರವದ ಸ್ಥಾನವನ್ನು ಪಡೆದಿದ್ದಳು. ಕ್ರಮೇಣ ಆರ್ಯ ಸಂಸ್ಕೃತಿಯ ಪ್ರಭಾವದಿಂದ ಆಕೆ ಸ್ವಾತಂತ್ರ್ಯ ಕಳೆದುಕೊಂಡಳು. ವೇದೋಪನಿಷತ್ತುಗಳ ಕಾಲದಲ್ಲಿ ಪುರುಷಸಮಾನರಾಗಿದ್ದ ಮಹಿಳೆಯರು ಧರ್ಮಶಾಸ್ತ್ರಗಳು ರೂಪುಗೊಂಡ ನಂತರ ಕಟ್ಟುಪಾಡುಗಳಿಗೆ, ನಿಯಮ-ನಿರ್ಬಂಧಗಳಿಗೆ ಒಳಗಾದರು. ಜೈನಧರ್ಮ ಕೂಡ ಸ್ತ್ರೀ ಮೋಕ್ಷಯೋಗ್ಯಳಲ್ಲವೆಂದು ಸಾಧಿಸಿತು. ಆ ಕಾಲದ ಸಮಾಜವು ಹೆಣ್ಣಿನ ಆಧ್ಯಾತ್ಮಿಕ, ಸಾಮಾಜಿಕ, ಆರ್ಥಿಕ, ನೈತಿಕ ಹಾಗೂ ಸಾಂಸ್ಕೃತಿಕ ಅವಕಾಶಗಳೆಲ್ಲವನ್ನು ಕಸಿದುಕೊಂಡು ಆಕೆಯನ್ನು ಗೌಣ ಮಾಡಿತ್ತು.

ಇಂತಹ ಸಂದರ್ಭದಲ್ಲಿ ಸಾಹಿತ್ಯ ರಚನೆಯಲ್ಲಿ ತೊಡಗಿಕೊಂಡ ಶಿವಶರಣರು ಸ್ತ್ರೀ ಸಮಾಜವನ್ನು ಸಾಮಾಜಿಕ ನ್ಯಾಯದ ಆಧಾರದ ಮೇಲೆ ಕಟ್ಟಲು ಶ್ರಮಿಸಿದರು. ಶರಣರು ಸ್ತ್ರೀ-ಪುರುಷ ಭೇದರಹಿತ ಉಭಯಪ್ರಧಾನ ಕುಟುಂಬ ಪದ್ಧತಿಯನ್ನು ಅಸ್ತಿತ್ವಕ್ಕೆ ತರಲು ಪ್ರಯತ್ನಿಸಿದರು. ಶಿವಶರಣೆಯರ ಬದುಕಿನ ಘಟನೆಗಳು ಹಾಗೂ ಮೌಲ್ಯಗಳ ಅಭಿವ್ಯಕ್ತಿಯನ್ನು ಗುರಿಯಾಗಿ ಮಾಡಿಕೊಂಡು ಶಿವಶರಣೆಯರು ವಚನಗಳನ್ನು ರಚಿಸಿದರು.

ಶರಣರ ಮೂಲ ಘೋಷ **'ಸ್ತ್ರೀ ಸಮಾನತೆ' ಆತ್ಮಕ್ಕೆ ಲಿಂಗಭೇದವಿಲ್ಲ** ಎಂಬ ಕಲ್ಪನೆಯನ್ನು ಶಿವಶರಣೆಯರು ವಚನಗಳಲ್ಲಿ ದಾಖಲಿಸಿದ್ದಾರೆ. ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣು, ಹೊನ್ನು ಹಾಗೂ ಮಣ್ಣುಗಳನ್ನು ಮಾಯೆಂದು ಪರಿಗಣಿಸಿ, ಮೋಕ್ಷ ಸಾಧನೆಗೆ ತೊಡಕಾಗುವ ಇವುಗಳಿಂದ ದೂರವಿರುವಂತೆ ಬೋಧಿಸಲಾಗುತ್ತಿತ್ತು. ಅದರಲ್ಲೂ ಹೆಣ್ಣನ್ನು ಪ್ರಧಾನ ಮಾಯೆ ಎಂದು ಭಾವಿಸಿ, ಪುರುಷನನ್ನು 'ಬಿಟ್ಟೆನೆಂದರೂ ಬಿಡದೆ ಬೆಂಬತ್ತಿ ಕಾಡುವ' ದುಷ್ಟಶಕ್ತಿಯಂತೆ ದೂಷಿಸಲಾಗಿತ್ತು. ಶಿವಶರಣರು ಈ ಮಾಯೆಯ ಪರಿಕಲ್ಪನೆಯ ಬಗೆಗಿದ್ದ ಚಿಂತನೆಯನ್ನು ವಿರೋಧಿಸಿ, ಹೆಣ್ಣನ್ನು ಮಾಯೆ ಎಂಬ ಬಂಧನದಿಂದ ಬಿಡುಗಡೆಗೊಳಿಸಿದರು.

'ಅಕ್ಷರ', ಐ.ವೈ.ಡಿ. ರಸ್ತೆ, ಅರಸಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ – 562123.

"ನಾಡಿನ ಹೆಣ್ಣುಗಳೆಲ್ಲಾ ಬನ್ನಿರೆ ಅಕ್ಕಗಳಿರಾ,
ಅಕ್ಕನರಸ ಬಸವಯ್ಯನು ಬಯಲ ಕಂಡು
ಬಟ್ಟಬಯಲಾದನು.
ಅಕ್ಕನರಸನಿಲ್ಲದೆ ನಿರಕ್ಕರನಾದನು ಬಸವಯ್ಯನು.
ನಮ್ಮ ಸಂಗಯ್ಯನಲ್ಲಿ ಬಸವಯ್ಯನೈಕ್ಯ ಬಯಲಿಲ್ಲದ
ಬಯಲು."

ಎಂಬ ನೀಲಮ್ಮನ ವಚನದಲ್ಲಿ ಹೆಣ್ಣನ್ನು ಬಸವಯ್ಯನ ಸಂಗದಲ್ಲಿ ಐಕ್ಯವಾಗಿ ಬಯಲಿಲ್ಲದ ಬಯಲಾಗುವ ರೀತಿಯನ್ನು ವರ್ಣಿಸಲಾಗಿದೆ.

"ಕೂಟಕ್ಕೆ ಸತಿಪತಿ ಎಂಬ ನಾಮವಲ್ಲದೆ
ಅರಿವಿಂಗೆ ಬೇರೊಂದೊಡಲುಂಟೆ?
ಬೇರೊಂದಡಿಯಿಡದಿರು."

ಎಂದು ಶಿವಶರಣೆ ಆಯ್ದಕ್ಕಿ ಲಕ್ಕಮ್ಮನು ಸಮಾನತೆಯನ್ನು ಸೂಚಿಸುತ್ತ

"ಕಾಯಕ ನಿಂದಿತ್ತು ಹೋಗಯ್ಯಾ ಎನ್ನಾಳ್ದನೆ,
ಭಾವಶುದ್ಧವಾಗಿ ಮಹಾಶರಣರ
ತಿಪ್ಪೆಯ ತಪ್ಪಲ ಅಕ್ಕಿಯ ತಂದು
ನಿಶ್ಚೈಸಿ ಮಾಡಬೇಕು."

ಎಂದು ಕಾಯಕತತ್ತ್ವವನ್ನು ಎತ್ತಿಹಿಡಿಯುವ ಹಾಗೂ ತನ್ನ ಸಂಗಾತಿಗೆ ಎಚ್ಚರಿಕೆಯ ನುಡಿಯನ್ನು ಹೇಳುವ ಭಾವವನ್ನು ಗಮನಿಸಬಹುದು.

"ಗಂಡು ಮೋಹಿಸಿ ಹೆಣ್ಣ ಹಿಡಿದಡೆ
ಅದು ಒಬ್ಬರ ಒಡವೆ ಎಂದು ಅರಿಯಬೇಕು.
ಹೆಣ್ಣು ಮೋಹಿಸಿ ಗಂಡ ಹಿಡಿದಡೆ
ಉತ್ತರವಾವುದೆಂದರಿಯಬೇಕು.
ಈ ಎರಡರ ಉಭಯವ ಕಳೆದು
ಸುಖಿ ತಾನಾಗಬಲ್ಲಡೆ ನಾಸ್ತಿನಾಥನು ಪರಿಪೂರ್ಣನೆಂಬೆ."

ಎಂಬ ಗೊಗ್ಗವ್ವೆಯ ಈ ಸಾಲುಗಳು ಲಿಂಗಭೇದದ ಸಹಜ ಭಾವವನ್ನು ದಾಟಿ ಪಾರಮಾರ್ಥಿಕ ತಿಳಿವು ಮೂಡಿ ಸುಖಿಯಾಗುವ ಪರಿಯನ್ನು ತಿಳಿಸುತ್ತವೆ.

ಹೆಣ್ಣಿನ ನೈಸರ್ಗಿಕ ಕ್ರಿಯೆಯಾದ ಋತುಚಕ್ರವನ್ನು ಅಪವಿತ್ರವೆಂದು ಭಾವಿಸಿದ್ದ ಕಾಲದಲ್ಲಿ ಆಕೆಯ ದಯನೀಯ ಸ್ಥಿತಿ ಕಂಡ ಶರಣರು ಆಕೆಯನ್ನು ಸೂತಕದಿಂದ ಬಿಡುಗಡೆ ಮಾಡಿದರು. ಸ್ತ್ರೀ ಎಲ್ಲ ಕಾರ್ಯಗಳಲ್ಲಿ ಸಮಭಾಗಿತ್ವ ಪಡೆದು ಮುಕ್ತವಾಗಿ ಬದುಕಲು ಆರಂಭಿಸಿದಳು.

"ಹೆಣ್ಣು ಹೆಣ್ಣಲ್ಲ;
ಹೆಣ್ಣು ರಕ್ಕಸಿಯಲ್ಲ;
ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನ."

ಎನ್ನುತ್ತಾ ಹೆಣ್ಣಿನಲ್ಲಿ ದೈವತ್ವವನ್ನು ಕಂಡ ಶರಣರು ಆಕೆಯನ್ನು ಅಸ್ಪೃಶ್ಯತೆಯಿಂದ ವಿಮುಕ್ತಗೊಳಿಸಿದರು.

ಹಡಪದ ಲಿಂಗಮ್ಮನೆಂಬ ಶಿವಶರಣೆಯು ಹೆಣ್ಣು ದೈವತ್ವಕ್ಕೇರಿದ ರೀತಿಯನ್ನು ಹೀಗೆ ವರ್ಣಿಸುತ್ತಾಳೆ.

"ಕನಿಷ್ಠದಲ್ಲಿ ಹುಟ್ಟಿದೆ, ಉತ್ತಮದಲ್ಲಿ ಬೆಳೆದೆ,
ಸತ್ಯ ಶರಣರ ಪಾದವಿಡಿದೆ,
ಆ ಶರಣರ ಪಾದವಿಡಿದು ಗುರುವ ಕಂಡೆ, ಲಿಂಗವ ಕಂಡೆ,
ಜಂಗಮವ ಕಂಡೆ, ಪಾದೋದಕವ ಕಂಡ,
ಪ್ರಸಾದವ ಕಂಡೆ.
ಇಂತಿವರ ಕಂಡೆನ್ನ ಕಂಗಳ ಮುಂದಣ ಕತ್ತಲೆ ಹರಿಯಿತ್ತು
ಕಂಗಳ ಮುಂದಣ ಕತ್ತಲೆ ಹರಿಯಲೊಡನೆ
ಮಂಗಳದ ಮಹಾಬೆಳಗಿನೊಳಗೋಲಾಡಿ
ಸುಖಿಯಾದೆನಯ್ಯಾ
ಅಪ್ಪಣ್ಣಪ್ರಿಯ ಚೆನ್ನಬಸವಣ್ಣಾ."

ಶರಣಧರ್ಮದಲ್ಲಿ ನೈತಿಕ ನಡವಳಿಕೆಗೆ ಪ್ರಥಮ ಪ್ರಾಶಸ್ತ್ಯ. ಶೀಲ ಹಾಗೂ ಚಾರಿತ್ರ್ಯಗಳು ವ್ಯಕ್ತಿಯ ಜೀವರತ್ನಗಳಿದ್ದಂತೆ ಎಂಬ ನೀತಿಯ ನೆಲೆಗಟ್ಟಿನ ಮೇಲೆ ಸುಂದರ ಸಮಾಜವನ್ನು ನಿರ್ಮಿಸುವ ಪ್ರಯತ್ನವನ್ನು ಶರಣರು ಮಾಡಿದರು. ಪುರುಷಪ್ರಧಾನ ವ್ಯವಸ್ಥೆಯಲ್ಲಿದ್ದ ಹೆಣ್ಣಿನ ಕುರಿತ ಅಭಿಪ್ರಾಯವನ್ನು ಬದಲಿಸಿ, ದೋಷ ಪೂರ್ಣ ದೃಷ್ಟಿಯನ್ನು ಬದಲಿಸಲು ಯತ್ನಿಸಿದರು.

"ಪರಧನ ಪರಸ್ತ್ರೀ ಪರದೈವಂಗಳಿಗೆಗದಿಪ್ಪುದೇ ನೇಮ"

ಎಂಬ ಸತ್ಯಕ್ಕನ ಮಾತುಗಳು ಈ ಹಿನ್ನೆಲೆಯಲ್ಲಿ ಮುಖ್ಯವಾಗುತ್ತವೆ.

"ಆತನ ಇದಿರಿನಲ್ಲಿ ಆತನ ಸತಿಯ 'ಅವ್ವಾ' ಎಂದು
ಆತ ಸಂದಲ್ಲಿ ಸತಿ ಎಂಬ ಭಂದರಿಗೇಕೆ ವ್ರತನೇಮ ನಿತ್ಯ."

– ಎಂಬ ಅಕ್ಕಮ್ಮನ ವಚನದಲ್ಲಿ ಪರಸತಿ ತಾಯಿಗೆ ಸಮಾನವೆಂದು ಭಾವಿಸಿ ಮಾತೃತ್ವವನ್ನಷ್ಟೇ ಅಲ್ಲ,



ಪಾರ್ವತಿಗೆ ಸಮಾನವೆಂದು ಭಾವಿಸಿ, ಆಕೆಯಲ್ಲಿ ದೈವತ್ವವನ್ನು ಕಾಣಬೇಕೆಂಬ ಪವಿತ್ರ ಭಾವನೆಯಿಂದ ನಾರೀಗೌರವವನ್ನು ದರ್ಶಿಸಲಾಗಿದೆ.

ಶರಣಧರ್ಮದಲ್ಲಿ ದಾಂಪತ್ಯ ಧರ್ಮ ಶ್ರೇಷ್ಠವಾದುದು. ಸಂಸಾರ ತ್ಯಾಜ್ಯವಲ್ಲ; ಸಂನ್ಯಾಸ ಶ್ರೇಷ್ಠವಲ್ಲ ಎಂಬ ಹಿನ್ನೆಲೆಯಿಂದ ನೈಸರ್ಗಿಕ ಸುಖವನ್ನು ಸಾತ್ವಿಕವಾಗಿ ಅನುಭವಿಸುವುದು ಬದುಕಿನ ಲಕ್ಷಣವಾಗಿದ್ದು, ಅದು ವ್ಯಕ್ತಿಯ ಸಾಧನೆ-ಸಿದ್ಧಿಗಳಿಗೆ ಪ್ರೇರಕ ಹಾಗೂ ಪೂರಕವೂ ಆಗಿರುತ್ತವೆ ಎಂದು ಶರಣರು ಪ್ರತಿಪಾದಿಸಿದ್ದಾರೆ. **"ಹೆಣ್ಣ ಬಿಟ್ಟು ಲಿಂಗವನೊಲಿಸಬೇಕೆಂಬರು, ಹೆಣ್ಣಿಂಗೆಯೂ ಲಿಂಗಕ್ಕೆಯೂ ವಿರುದ್ಧವೆ?"** ಎಂಬ ಪ್ರಶ್ನೆಯ ಮೂಲಕ ಜಗೇಶ ಮಸಣಯ್ಯಗಳ ಪುಣ್ಯಸ್ತ್ರೀ ದಾಂಪತ್ಯ ಜೀವನದ ಮುಕ್ತದ್ವಾರವನ್ನು ತೆರೆದಿಡುತ್ತಾರೆ.

ಶಿವಶರಣೆಯಲ್ಲಿ ಪ್ರಮುಖಳಾದ ಅಕ್ಕಮಹಾದೇವಿಯು ರಾಜ ಕೌಶಿಕನ ವ್ಯಾಮೋಹಕ್ಕೆ ಗುರಿಯಾದುದೇ ಆಕೆಯ ಜೀವನದ ಮುಖ್ಯ ಘಟನೆಯಾಗಿದೆ. ಈ ಘಟನೆಯ ಕೊನೆಯಲ್ಲಿ ಅಕ್ಕಮಹಾದೇವಿಯು ಮಲ್ಲಿಕಾರ್ಜುನ ಮೋಹಿತೆಯಾಗಿ ಹೊರಟಳೆಂದೂ, ದಿಗಂಬರೆಯಾಗಿ ಹೊರಬಿದ್ದಳೆಂದೂ ಕಾವ್ಯಗಳು ಹೇಳುತ್ತವೆ. ಮಹಾದೇವಿಯಕ್ಕನು ಕಂಬಳಿಯನ್ನು ಹೊದ್ದು ಹೊರಟಳೆಂದು ಭಾವಿಸುವುದೇ ಸೂಕ್ತ ಎಂದು ಕೊಂಡಗುಳಿ ಕೇಶಿರಾಜನ ಘಟನೆಯ ಹಿನ್ನೆಲೆಯಿಂದ ಹೇಳಬಹುದು. ಗಂಡ ಮತ್ತು ವಿಚಾರಸ್ವಾತಂತ್ರ್ಯದ ಅಯ್ಯಗಳು ಎದುರಾದಾಗ ಗಂಡನನ್ನು ಧಿಕ್ಕರಿಸಿ ವಿಚಾರಸ್ವಾತಂತ್ರ್ಯವನ್ನು ಆಯ್ದುಕೊಂಡುದು ಕರ್ನಾಟಕದ ಮಹಿಳಾ ಲೋಕದ ಇತಿಹಾಸದಲ್ಲಿ ಅಪರೂಪದ ಘಟನೆಯಾಗಿದೆ.

ಅಮುಗೆ ರಾಯಮ್ಮನ ವಚನಗಳಲ್ಲಿ ನಾರೀ ಶಕ್ತಿಯ ಕುರಿತ ಒಂದು ವಚನ ಮಹತ್ವದೆನಿಸುತ್ತದೆ. **"ಹೆದರದಿರು ಮನವೆ, ಹಿಮ್ಮೆಟ್ಟದಿರು ಮನವೆ, ಹಿಡಿದ ಛಲವ ಬಿಡದಿರು ಮನವೆ"** ಎಂದು ದಿಟ್ಟತನದಿಂದ ಭಾವಶುದ್ಧಿಯಿಂದ ಮುನ್ನಡೆದ ಆಕೆ ಅರಿವನ್ನೇ ಗುರುವಾಗಿ ಮಾಡಿಕೊಳ್ಳುತ್ತಾಳೆ. ಆಕೆಗೆ ಅನ್ಯ ಗುರುಲಿಂಗ ಜಂಗಮದ ಅವಶ್ಯಕತೆಯೇ ಬೀಳುವುದಿಲ್ಲ ಎಂಬ ಹಿನ್ನೆಲೆಯಲ್ಲಿ ಆಕೆ ಸದೃಢಳೂ ಆಗಿರುವುದನ್ನು ಗುರುತಿಸಬಹುದು. ರಾಯಮ್ಮನ ವಚನಗಳು ಅವಳ ವ್ಯಕ್ತಿವಿಶೇಷವಾದ ಕೆಚ್ಚು, ಧೈರ್ಯ, ನಿಷ್ಠುರತೆಗಳನ್ನು ಮೈಗೂಡಿಸಿಕೊಂಡು ಪ್ರತ್ಯೇಕವಾಗುತ್ತವೆ. "ಅವಳ ಭಾಷೆಯ ಒರಟುತನವೇ ಅವಳ ಅಭಿವ್ಯಕ್ತಿಗೆ ನಾವೀನ್ಯತೆಯನ್ನು ತರುತ್ತದೆ" ಎಂಬ ಡಾ. ಎಂ.ಚಿದಾನಂದಮೂರ್ತಿ ಅವರ ಮಾತುಗಳು ಸತ್ಯವಾದುದಾಗಿದೆ.

ಶರಣರ ಆಶಯಗಳನ್ನು ಪರಿಪೂರ್ಣವಾಗಿ ದರ್ಶಿಸುವ ಶಿವಶರಣೆಯರ ವಚನಗಳಲ್ಲಿ ನಾರೀ ಶಕ್ತಿಯ ಭಕ್ತಿ, ಕಾಯಕ ಹಾಗೂ ಉನ್ನತ ಮೌಲ್ಯಗಳ ಮೂಲಕ ಪರಮಾತ್ಮನಾದ ಶಿವನನ್ನು ಸಾಕ್ಷಾತ್ಕರಿಸಿಕೊಳ್ಳುವ ಹಂತಗಳನ್ನು ಕಾಣಬಹುದು. ಇದು ೧೨ನೇ ಶತಮಾನದ ಕರ್ನಾಟಕದಲ್ಲಿ ನಡೆದ ಆಮೂಲಾಗ್ರ ಬದಲಾವಣೆಗೆ ಸಾಕ್ಷಿಯಾಗುತ್ತವೆ.

## ಶ್ರೀವಾಣಿ

ವೀರಶೈವ ಧರ್ಮದಲ್ಲಿರುವ ಒಳಪಂಗಡಗಳನ್ನು ನಿರ್ಮೂಲನೆ ಮಾಡಿ ಸಮಾಜದ ಸಂಘಟನೆಯನ್ನು ಬಲಪಡಿಸುವ ನಿಟ್ಟಿನಲ್ಲಿ ಯುವಕರು ಮುಂದಾಗಬೇಕು. ಒಳಪಂಗಡಗಳ ಹೆಸರಿನಲ್ಲಿ ಸಮಾಜವನ್ನು ಛಿದ್ರಗೊಳಿಸುವ ಪ್ರವೃತ್ತಿಯನ್ನು ಸಮಾಜ ಬಾಂಧವರು ಮತ್ತು ಎಲ್ಲಾ ಮಠಾಧೀಶರು ಒಕ್ಕೊರಲಿನಿಂದ ಖಂಡಿಸಬೇಕು. ಹಲವಾರು ಕಾರಣಗಳಿಂದ ಇಂದು ವೀರಶೈವ ಸಮಾಜ ಛಿದ್ರವಾಗಿದ್ದು ಈ ಸಮಾಜದ ಒಗ್ಗಟ್ಟಿಗೆ, ಒಗ್ಗೂಡುವಿಕೆಗೆ ಯುವಜನರು ತತ್ವಪ್ರೇಮಿಗಳಾಗಿ ಒಳಪಂಗಡಗಳ ನಿರ್ಮೂಲನೆಯ ಕಾರ್ಯದಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳಬೇಕು.

ಸಾವಿರಾರು ವರ್ಷಗಳ ಅವಧಿಯಲ್ಲಿ ಕೆಲವೇ ಕೆಲವು ಪ್ರವಾದಿಗಳನ್ನು ಜಗತ್ತಿನಾದ್ಯಂತ ಜನರು ಈಗಲೂ ಸ್ಮರಿಸುತ್ತಾರೆ. ಏಸುಕ್ರಿಸ್ತ, ಮಹಮ್ಮದ್ ಪೈಗಂಬರ್, ಮಹಾವೀರ, ಬುದ್ಧ, ಬಸವಣ್ಣನವರು ಮುಂತಾದ ಮಹಾತ್ಮರು ಮನುಕುಲಕ್ಕೆ ಮಾನವಧರ್ಮ ನೀಡಿದರು. ಅಂಥವರಲ್ಲಿ ಬಸವಣ್ಣನವರು ಜಗತ್ತಿಗೆ ಕೊಟ್ಟಿರುವ ಸಂದೇಶವನ್ನು ಅರ್ಥಮಾಡಿಕೊಳ್ಳಬೇಕು. ಭಾರತೀಯ ಸಂಸ್ಕೃತಿಯ ತಿರುಳನ್ನು ಜಗತ್ತಿಗೆ ಕೊಟ್ಟ ಮಹಾಮಾನವತಾವಾದಿ ಬಸವಣ್ಣನವರು.

ಶರಣಾಂಜಲಿ

# ಶ್ರೀ ಎಂ. ಸಿದ್ಧಲಿಂಗಯ್ಯನವರು ವಿಧಿವಶ

ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯಲ್ಲಿ ಲೆಕ್ಕಾಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದ ಶ್ರೀ ಎಂ. ಸಿದ್ಧಲಿಂಗಯ್ಯನವರು ಮೇ ೨೨ ರಂದು ವಿಧಿವಶರಾದರೆಂದು ತಿಳಿಸಲು ಸಿದ್ಧಗಂಗಾ ವಿಷಾದಿಸುತ್ತದೆ. ಅವರಿಗೆ ೯೫ ವರ್ಷವಾಗಿತ್ತು.

೯೫ ವಸಂತಗಳ ಬೇವು-ಬೆಲ್ಲವನ್ನು ಸಮಚಿತ್ತದಿಂದ ಸವಿದ ಶ್ರೀ ಎಂ. ಸಿದ್ಧಲಿಂಗಯ್ಯನವರು ಜುಲೈ ೬, ೧೯೨೮ ರಂದು, ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕು, ಮಧುರೆ ಹೋಬಳಿ ಕೋಡಿಹಳ್ಳಿಯಲ್ಲಿ ಶರಣ ದಂಪತಿಗಳಾದ ಮಲ್ಲಯ್ಯ ಮತ್ತು ಭದ್ರಕಾಳಮ್ಮ ಅವರ ಸುಪುತ್ರರಾಗಿ ಜನಿಸಿದರು.

ಕೋಡಿಹಳ್ಳಿ, ಕಾಡನೂರು, ಸುಗ್ಗನಹಳ್ಳಿ, ತುಮಕೂರು, ಬೆಂಗಳೂರಿನಲ್ಲಿ ಶಿಕ್ಷಣವನ್ನು ಪಡೆದ ಶ್ರೀಯುತರು, ೧೯೫೨ ರಲ್ಲಿ ಬಿ.ಕಾಂ ಪದವಿ ಮುಗಿಸಿದರು. ತಮ್ಮ ವಿದ್ಯಾಭ್ಯಾಸವನ್ನು ಶ್ರೀ ಸಿದ್ಧಗಂಗಾ ಮಠ, ಬೆಂಗಳೂರಿನ ಮಹಂತಮಠ, ರಾವಬಹದ್ದೂರ್ ಗುಬ್ಬಿ ತೋಟದಪ್ಪ ಧರ್ಮಶಾಲೆಯಲ್ಲಿ ಆಶ್ರಯ ಪಡೆದು ತಮ್ಮ ಭವಿಷ್ಯವನ್ನು ರೂಪಿಸಿಕೊಂಡರು.

ಮೈಸೂರು ಎಲೆಕ್ಟ್ರಿಕ್ ಇಲಾಖೆಯಲ್ಲಿ ಲೆಕ್ಕ ಸಹಾಯಕರಾಗಿ ವೃತ್ತಿ ಜೀವನವನ್ನು ಪ್ರಾರಂಭಿಸಿದ ಶ್ರೀ ಎಂ. ಸಿದ್ಧಲಿಂಗಯ್ಯನವರು, ಲೆಕ್ಕ ಸಹಾಯಕ ಅಧಿಕಾರಿಯಾಗಿ, ಲೆಕ್ಕಾಧಿಕಾರಿಯಾಗಿ, ಡೆಪ್ಯೂಟಿ ಕಂಟ್ರೋಲರ್ ಆಫ್ ಅಕೌಂಟ್ಸ್ ಆಗಿ ಸೇವೆ ಸಲ್ಲಿಸಿ ೧೯೮೬ರಲ್ಲಿ ನಿವೃತ್ತಿ ಹೊಂದಿದರು.

ಶ್ರೀ ಸಿದ್ಧಲಿಂಗಯ್ಯನವರು ಶ್ರೀ ಸಿದ್ಧಗಂಗಾ ಮಠ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅಪಾರ ಭಕ್ತಿ, ಗೌರವವನ್ನಿಟ್ಟುಕೊಂಡಿದ್ದರು. ಪರಮಪೂಜ್ಯ ಶ್ರೀ ಶ್ರೀಗಳವರ ಆಶಯದಂತೆ ೧೯೮೭ ರಿಂದ ಕೊನೆ ಉಸಿರಿರುವವರೆಗೂ ಶ್ರೀಮಠದಲ್ಲಿ ಲೆಕ್ಕಾಧಿಕಾರಿಯಾಗಿ ಪ್ರಾಮಾಣಿಕ ಸೇವೆ ಸಲ್ಲಿಸಿ ಎಲ್ಲರ ಪ್ರೀತಿ, ಗೌರವಕ್ಕೆ ಪಾತ್ರರಾಗಿದ್ದರು. ಲೆಕ್ಕಪತ್ರಗಳಲ್ಲಿ ಸೂಜಿ ಮೊನೆಯಷ್ಟು ವ್ಯತ್ಯಾಸವಾಗದಂತೆ ಎಚ್ಚರಿಕೆ ವಹಿಸಿದ್ದರು. ತಮ್ಮ ಸೇವಾ ಜೀವನದುದ್ದಕ್ಕೂ ಸಮಯ ನಿಷ್ಠೆಯನ್ನು ಕಾಪಾಡಿಕೊಂಡು ಬಂದಿದ್ದರು.

ಶ್ರೀಮಠಕ್ಕೆ ಸಂಬಂಧಿಸಿದ ಹಣಕಾಸು ಯಾವುದೇ ರೂಪದಲ್ಲಿ, ಯಾವುದೇ ಕಡೆಯಿಂದಾದರೂ ಬರಲಿ ಅದರಲ್ಲಿ ಲೋಪವಾಗಬಾರದು ಎಂಬ ಮಾಹೇಶ್ವರ ನಿಷ್ಠೆಯ ಶ್ರೀ ಎಂ. ಸಿದ್ಧಲಿಂಗಯ್ಯನವರು ಪ್ರಚಾರದಿಂದ ದೂರವಿದ್ದರು. ತಾವು ಮಾಡುವ ಕೆಲಸದ ಮೂಲಕ 'ಕಾಯಕ'ಕ್ಕೆ ಮಹತ್ತನ್ನು ತಂದುಕೊಟ್ಟಿದ್ದರು. ತಾವು ನಂಬಿದ ಆದರ್ಶ ಜೀವನ ಮೌಲ್ಯಗಳಿಗೆ ಚ್ಯುತಿಬಾರದಂತೆ ಜತನದಿಂದ ಕಾಪಾಡಿಕೊಂಡು ಬಂದಿದ್ದರು.

ಶ್ರೀಮಠದ ಹಳೆಯ ವಿದ್ಯಾರ್ಥಿಯಾಗಿದ್ದ ಶ್ರೀ ಸಿದ್ಧಲಿಂಗಯ್ಯನವರು ಶ್ರೀಮಠಕ್ಕೆ ಸಲ್ಲಿಸಿದ ಅನನ್ಯ ಸೇವೆಯನ್ನು ಪರಿಗಣಿಸಿ ಜನವರಿ ೧೫, ೨೦೧೫ ರಂದು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಹಾಗೂ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ 'ಉದ್ದಾನಶ್ರೀ' ಪ್ರಶಸ್ತಿಯನ್ನು, 'ಪ್ರಾಮಾಣಿಕ ಪದ್ಮಸಿರಿ' ಎಂದು ಗೌರವಿಸಿ ಪ್ರದಾನ ಮಾಡಲಾಗಿತ್ತು.

ಮೃತರ ಆತ್ಮಕ್ಕೆ ಚಿರಶಾಂತಿಯನ್ನು, ಅವರ ಕುಟುಂಬದವರಿಗೆ ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲಿ ಎಂದು 'ಸಿದ್ಧಗಂಗಾ' ಶ್ರದ್ಧೆಯನ್ನು ಅರ್ಪಿಸುತ್ತದೆ.



ವರದಿ :

# ಸಿದ್ಧಗಂಗಾ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆ

## ಸಿದ್ಧಗಂಗಾ ಆಸ್ಪತ್ರೆಯಲ್ಲಿ ಅಂತರಾಷ್ಟ್ರೀಯ ದಾದಿಯರ ದಿನಾಚರಣೆ

ದಾದಿಯರು ಮಾನವತೆಯ ಪ್ರತೀಕ: ಡಾ. ಶಾಲಿನಿ : "ಹುಟ್ಟಿನಿಂದ ಸಾವಿನವರೆಗೂ ಮನುಷ್ಯನಿಗೆ ಉಂಟಾಗುವ ಪ್ರತಿ ಆರೋಗ್ಯ ಸಮಸ್ಯೆಯಲ್ಲೂ ವೈದ್ಯರ ಚಿಕಿತ್ಸೆಯ ಆಧಾರವಾಗಿ ಪೋಷಣೆ ಮಾಡುವವರು ದಾದಿಯರಾಗಿದ್ದು, ಎರಡನೇ ತಾಯಿಯಂತೆ ಸಲಹುವ ಎಲ್ಲಾ ಮಹಿಳೆ ಹಾಗೂ ಪುರುಷ ದಾದಿಯರು ಮಾನವತೆಯ ಪ್ರತೀಕವಾದವರು" ಎಂದು ಸಿದ್ಧಗಂಗಾ ಮೆಡಿಕಲ್ ಕಾಲೇಜು ಪ್ರಾಚಾರ್ಯರಾದ ಡಾ.ಶಾಲಿನಿ ರವರು ತಿಳಿಸಿದರು.

ಅವರು ಸಿದ್ಧಗಂಗಾ ಆಸ್ಪತ್ರೆಯಲ್ಲಿ ಮಲಬಾರ್ ಗೋಲ್ಡ್ ಸಹಯೋಗದಲ್ಲಿ ನಡೆದ ಅಂತರಾಷ್ಟ್ರೀಯ ದಾದಿಯರ ದಿನವನ್ನು ಉದ್ಘಾಟಿಸಿ ಮಾತನಾಡಿದ ಅವರು "ಕೋವಿಡ್ ಸಂದರ್ಭದಲ್ಲಿ ಮನುಕುಲವನ್ನೇ ಸಾವಿನ ದವಡೆಯಿಂದ ಕಾಪಾಡಿದವರು. ದಾದಿಯರು ಸಾವು ಬದುಕಿನ ನಡುವೆ ತಾವು ಹೋರಾಡುತ್ತಾ ರೋಗಿಗಳ ಜೀವ ಉಳಿಸಿಸುವ ಅವರ ತ್ಯಾಗ, ವಾತ್ಸಲ್ಯ ಹಾಗೂ ಕರ್ತವ್ಯ ಪ್ರಜ್ಞೆ ಮಾದರಿಯಾದದ್ದು" ಎಂದರು.

ಅಭಿನಂದನೆ ಸ್ವೀಕರಿಸಿ ಮಾತನಾಡಿದ ಸಿದ್ಧಗಂಗಾ ಆಸ್ಪತ್ರೆ ನರ್ಸಿಂಗ್ ವಿಭಾಗದ ಮುಖ್ಯಸ್ಥರಾದ ಶ್ರೀ ನಾಗಣ್ಣನವರು "ಯಾವುದೇ ಒಂದು ಆಸ್ಪತ್ರೆಯ ಬೆನ್ನುಲುಬು ಎಂದರೆ ಅದು ನರ್ಸಿಂಗ್ ವಿಭಾಗ. ಭಾರತೀಯ ನರ್ಸ್‌ಗಳ ಸೇವೆಗೆ ಕೇವಲ ಭಾರತದಷ್ಟೇ ಅಲ್ಲದೆ ವಿದೇಶದಲ್ಲಿಯೂ ಬಹಳಷ್ಟು ಗೌರವವಿದೆ. ಔದ್ಯೋಗಿಕ ಬದುಕಿನ ಜೊತೆಗೆ ಸೇವಾ ಮೌಲ್ಯವನ್ನೂ ಹೊಂದುವ ಉದ್ಯೋಗವೆಂದರೆ ಅದು ನರ್ಸಿಂಗ್ ವಿಭಾಗದ್ದಾಗಿದೆ" ಎಂದರು.

ಸಿದ್ಧಗಂಗಾ ಆಸ್ಪತ್ರೆ ಸಿಇಒ ಡಾ.ಸಂಜೀವ್ ಕುಮಾರ್, ಮಲಬಾರ್ ಗೋಲ್ಡ್ ಮಾರ್ಕೆಟಿಂಗ್ ವಿಭಾಗದ ಮುಖ್ಯಸ್ಥರಾದ ಶ್ರೀ ಪ್ರೇಮ್ ಹಾಗೂ ಆಸ್ಪತ್ರೆ ಸಿಬ್ಬಂದಿ ಉಪಸ್ಥಿತರಿದ್ದರು.

## ಕೈಗಳ ಸ್ವಚ್ಛತೆ ಬಗ್ಗೆ ಅರಿವು ಕಾರ್ಯಕ್ರಮ

ಸಿದ್ಧಗಂಗಾ ಆಸ್ಪತ್ರೆಯಲ್ಲಿ ನಡೆದ ಹ್ಯಾಂಡ್ ಹೈಜಿನ್ ಡೇ ಅಂಗವಾಗಿ ಜಾಗೃತಿ ಕಾರ್ಯಕ್ರಮ ನಡೆಯಿತು.. ಕಾರ್ಯಕ್ರಮದ ಅಂಗವಾಗಿ ಪ್ಯಾರಾಮೆಡಿಕಲ್ ಕಾಲೇಜು ವಿದ್ಯಾರ್ಥಿಗಳಿಂದ ಕೈಗಳ ಸ್ವಚ್ಛತೆಯ ಕುರಿತು ಪ್ರಾತ್ಯಕ್ಷಿಕೆ ನಡೆಸಿಕೊಟ್ಟರು.







ಇದೇ ವೇಳೆ ಮಾತನಾಡಿದ ಸಿದ್ಧಗಂಗಾ ಮೆಡಿಕಲ್ ಕಾಲೇಜು ಪ್ರಾಚಾರ್ಯರಾದ ಡಾ.ಶಾಲಿನಿರವರು "ಯಾವುದೇ ರೋಗ ದೇಹಕ್ಕೆ ಹಾನಿ ಮಾಡುವ ಮೊದಲು ಅದು ಹರಡುವ ಲಕ್ಷಣಗಳ ಬಗ್ಗೆ ಅರಿವಿದ್ದರೆ, ರೋಗದಿಂದ ದೂರವಿರುವುದರ ಜೊತೆಗೆ ಆರೋಗ್ಯಕರ ಜೀವನ ನಡೆಸಬಹುದು. ಆರೋಗ್ಯಕರ ಅಭ್ಯಾಸಗಳನ್ನು ನಮ್ಮ ಬದುಕಿನ ಭಾಗವಾಗಿ ಮಾಡಿಕೊಳ್ಳಬೇಕು. ಪ್ರಮುಖವಾಗಿ ನಿತ್ಯ ನಾವು ನಮ್ಮ ಕೈಗಳನ್ನು ಸ್ವಚ್ಛವಾಗಿಟ್ಟುಕೊಂಡಿದ್ದೇ ಆದಲ್ಲಿ ಬಹುಪಾಲು ರೋಗಗಳಿಂದ ದೂರವಿರಬಹುದು" ಎಂದರು.

ಸೂಪರ್ ಸ್ಪೆಷಾಲಿಟಿ ವಿಭಾಗದ ಮುಖ್ಯಸ್ಥರು ಹಾಗೂ ಹೃದ್ರೋಗ ತಜ್ಞರಾದ ಡಾ.ಭಾನುಪ್ರಕಾಶ್ ಹೆಚ್.ಎಂ. ಮಾತನಾಡಿ "ಕೋವಿಡ್ ನಮಗೆ ಕಲಿಸಿದ ಪಾಠಗಳಲ್ಲಿ ಕೈಗಳ ಸ್ವಚ್ಛತೆಯೂ ಒಂದಾಗಿದೆ. ಕೋವಿಡ್ ಬಹುಪಾಲು ಕೈಗಳ ಮೂಲಕ ಹರಡಿ ಜೀವ ಕಳೆದುಕೊಳ್ಳುವ ಪರಿಸ್ಥಿತಿ ನಿರ್ಮಾಣವಾಗಿತ್ತು. ಹಾಗಾಗಿ ನಾವು ಯಾವುದೇ ಅನೈರ್ಮಲ್ಯದಿಂದ ಕೂಡಿದ ವಸ್ತುಗಳನ್ನು ಮುಟ್ಟಿದ ನಂತರ ಅಹಾರ ಸೇವಿಸುವ ಮುನ್ನ ಅಥವಾ ಕೈಗಳನ್ನು ಕಣ್ಣು, ಬಾಯಿಗೆ ತಾಗಿಸುವ ಮುನ್ನ ಸಾಬೂನು ಬಳಿ ಕೈಗಳನ್ನು ಸ್ವಚ್ಛಾಗಿ ತೊಳೆದುಕೊಳ್ಳಬೇಕು. ಇದರಿಂದ ಸೋಂಕು ತಡೆಗಟ್ಟಬಹುದು" ಎಂದರು.

ಮೈಕ್ರೋಬಯಾಲಜಿ ವಿಭಾಗದ ಮುಖ್ಯಸ್ಥರಾದ ಡಾ.ರೇಣುಶ್ರೀ ರವರು ಮಾತನಾಡಿ "ಶೇ.೮೦ ರಷ್ಟು ಸೋಂಕುಗಳು ಕೇವಲ ಕೈಗಳ ಮುಖಾಂತರವೇ ಹರಡುತ್ತದೆ. ಯಾವುದೇ ವಸ್ತುವಿನ ಮೇಲೆ ಹರಡಿರುವ ಸೋಂಕಿನ ಕೀಟಾಣುಗಳು ಬರೋಬ್ಬರಿ ಎರಡು ಗಂಟೆಗೂ ಹೆಚ್ಚು ಅವಧಿಯವರೆಗೆ ಉಳಿಯುವುದರಿಂದ ನಾವು ಯಾವುದೇ ಕ್ಷಣದಲ್ಲಾದರೂ ಸೋಂಕಿಗೆ ಒಳಗಾಗಬಹುದು. ಒಂದು ವೇಳೆ ನಾವು ಕೈಗಳನ್ನು ಸ್ವಚ್ಛ ಮಾಡಿಕೊಂಡಿದ್ದೇ ಆದಲ್ಲಿ ಇಂತಹ ಕೀಟಾಣುಗಳಿಂದ ದೂರವಿದ್ದು ಸೋಂಕು ಮುಕ್ತ ಜೀವನ ನಡೆಸಬಹುದು" ಎಂದರು.

ಮೆಡಿಕಲ್ ಕಾಲೇಜು ಮೇಲ್ವಿಚಾರಕ ಡಾ.ನಿರಂಜನಮೂರ್ತಿ, ಸಿದ್ಧಗಂಗಾ ಆಸ್ಪತ್ರೆ ನರ್ಸಿಂಗ್ ವಿಭಾಗದ ಮುಖ್ಯಸ್ಥರಾದ ನಾಗಣ್ಣ, ಸಿಇಓ ಶ್ರೀ ಸಂಜೀವ್ ಕುಮಾರ್ ಮುಂತಾದವರು ಉಪಸ್ಥಿತರಿದ್ದರು.

## ಗಂಡನಿಂದ ಹೆಂಡತಿಗೆ ಸಿಪಿಆರ್ ಚಿಕಿತ್ಸೆ – ಪ್ರಶಂಸೆ ವ್ಯಕ್ತಪಡಿಸಿದ ಡಾ.ಭಾನುಪ್ರಕಾಶ್

"ಇತ್ತೀಚಿನ ದಿನಗಳಲ್ಲಿ ಹೃದಯ ಸಂಬಂಧಿಸಿದ ಸಮಸ್ಯೆಗಳು ಹೆಚ್ಚುತ್ತಿವೆ. ಮಧ್ಯವಯಸ್ಕರಲ್ಲಿಯೂ ಹೃದಯಬೇನೆ ಕಂಡು ಬರುತ್ತಿರುವುದು ಆತಂಕಕಾರಿ. ಇಂತಹ ಆತಂಕದ ದಿನಗಳಲ್ಲಿ ಹೃದಯಾಘಾತದ ಅರಿವು, ಅದರ ಬಗ್ಗೆ ತಿಳುವಳಿಕೆ ಹಾಗೂ ಪ್ರಾಥಮಿಕ ಚಿಕಿತ್ಸೆಯ ಜ್ಞಾನವಿದ್ದರೆ ಎಂತಹ ಕಠಿಣ ಸಂದರ್ಭದಲ್ಲಿಯೂ ಹೃದಯಾಘಾತವನ್ನು ತಪ್ಪಿಸಬಹುದು" ಇದಕ್ಕೆ ಉದಾಹರಣೆ : ತೋಟದಲ್ಲಿ ಕೆಲಸ ಮಾಡುತ್ತಿದ್ದಾಗ ನಿಶ್ಯಕ್ತಿಯಿಂದ ಕುಸಿದು ಬಿದ್ದ ಹೆಂಡತಿಗೆ ರೈತ ಉಮೇಶ್‌ರವರು ಸಿಪಿಆರ್ ಚಿಕಿತ್ಸೆಯನ್ನು ನೀಡುವ ಮೂಲಕ ಜೀವಾಪಾಯದಿಂದ ಪಾರು ಮಾಡಿದ್ದಾರೆ.

ಈ ಕುರಿತು ಸಿದ್ಧಗಂಗಾ ಸೂಪರ್ ಸ್ಪೆಷಾಲಿಟಿ ಮುಖ್ಯಸ್ಥರಾದ ಡಾ.ಭಾನುಪ್ರಕಾಶ್‌ರವರು ಪ್ರಶಂಸೆ ವ್ಯಕ್ತಪಡಿಸಿ "ಸಿಪಿಆರ್ ತರಬೇತಿ, ಪ್ರತಿಯೊಬ್ಬ ನಾಗರಿಕನಿಗೂ ತಿಳಿದಿರಬೇಕಾದ ವಿಷಯ. ಇದರಿಂದ ಹೃದಯಾಘಾತಕ್ಕೆ ತಕ್ಷಣವೇ ಸ್ಪಂದಿಸುವುದಕ್ಕೆ ಅನುಕೂಲವಾಗುತ್ತದೆ. ಕೊರಟಗೆರೆಯ ರೈತ ಉಮೇಶ್‌ರವರು ಬದುಕಿಸುವ ಮೂಲಕ ಸಿಪಿಆರ್ ಮಹತ್ವವನ್ನು ಸಾರಿದ್ದಾರೆ. ಪ್ರತಿಯೊಬ್ಬರೂ ಸಿಪಿಆರ್ ಚಿಕಿತ್ಸೆಯ ಬಗ್ಗೆ ಜ್ಞಾನವನ್ನು ಹೊಂದಿರುವುದು ಇಂದಿನ ದಿನಗಳಲ್ಲಿ ಅನಿವಾರ್ಯ" ಎಂದರು.

## ಪ್ರವಾಸದಲ್ಲಿದ್ದಾಗ ಹೃದಯಾಘಾತ

ಪ್ರವಾಸಕ್ಕೆ ತೆರಳಿ ಹೃದಯಾಘಾತಕ್ಕೆ ಒಳಗಾಗಿ ಹಾಸನದಿಂದ ತುಮಕೂರಿಗೆ ಆಗಮಿಸಿದ ಶ್ರೀ ಕೆ.ಹೆಚ್. ನಾಗರಾಜುರವರು ಆಸ್ಪತ್ರೆಯ ಹೃದ್ರೋಗ ವಿಭಾಗದ ಚಿಕಿತ್ಸೆ ಪಡೆದು ಗುಣಮುಖರಾಗಿದ್ದಾರೆ. ಆಸ್ಪತ್ರೆಯ ಸೇವೆಯ ಬಗ್ಗೆ ಹೆಮ್ಮೆಯಿಂದ ಮಾತನಾಡಿ "ನನಗೆ ಮರುಜನ್ಮ ಸಿಕ್ಕಿದೆ. ಬಹಳ ಅಚ್ಚುಕಟ್ಟಾಗಿ ನನ್ನನ್ನು ನೋಡಿಕೊಂಡಿದ್ದಾರೆ. ಡಾ.ರವಿಚಂದ್ರರವರು ಧೈರ್ಯಕೊಟ್ಟು ನನಗೆ ಬೈಪಾಸ್ ಸರ್ಜರಿ ನಡೆಸಿದರು. ಕಳೆದ ಎರಡು ವರ್ಷದಿಂದ ಉಸಿರಾಟದ ಸಮಸ್ಯೆಯಿದ್ದರೂ ನಾನು ತೋರಿಸಿಕೊಂಡಿರಲಿಲ್ಲ. ಸಿದ್ಧಗಂಗಾ ಆಸ್ಪತ್ರೆಯ ವೈದ್ಯರ ಯಶಸ್ವಿ ಚಿಕಿತ್ಸೆಯಿಂದ ಚೇತರಿಕೆ ಕಂಡಿದ್ದೇನೆ" ಎಂದರು.







## ಸಿದ್ಧಗಂಗಾ ಆಸ್ಪತ್ರೆಗೆ ದೇಹದಾನ



ವಯೋಸಹಜ ಅನಾರೋಗ್ಯದಿಂದ ಬಳಲುತ್ತಿದ್ದ ತುಮಕೂರಿನ ನಿವೃತ್ತ ತಹಶಿಲ್ದಾರ್ ಡಿ.ರಂಗಯ್ಯನವರು ಚಿಕಿತ್ಸೆ ಫಲಕಾರಿಯಾಗದೆ ಮೃತಪಟ್ಟ ಹಿನ್ನಲೆಯಲ್ಲಿ ಕುಟುಂಬಸ್ಥರು ರಂಗಯ್ಯನವರ ಆಸೆಯಂತೆ ಅವರ ದೇಹವನ್ನು ವೈದ್ಯಕೀಯ ಅಧ್ಯಯನಕ್ಕಾಗಿ ಸಿದ್ಧಗಂಗಾ ಆಸ್ಪತ್ರೆಗೆ ದಾನಮಾಡಿದ್ದಾರೆ.

ಈ ಕುರಿತು ಪ್ರಕಟಣೆಯಲ್ಲಿ ತಿಳಿಸಿರುವ ಸಿದ್ಧಗಂಗಾ ಆಸ್ಪತ್ರೆ ತೀವ್ರತರ ಆರೋಗ್ಯ ಸಮಸ್ಯೆಯಿಂದ ಚಿಕಿತ್ಸೆಗಾಗಿ ಆಸ್ಪತ್ರೆಯಲ್ಲಿ ದಾಖಲಾಗಿದ್ದ ಶ್ರೀಯುತರು ಚಿಕಿತ್ಸೆ ಫಲಕಾರಿಯಾಗದೆ ನಿಧನರಾಗಿದ್ದು, ಕುಟುಂಬಸ್ಥರ ಮನವಿ ಮೇರೆಗೆ ವೈದ್ಯಕೀಯ ಕಾಲೇಜಿನ ಸಂಶೋಧನೆಗಾಗಿ ಪಡೆಯಲಾಗಿದೆ ಎಂದು ತಿಳಿಸಿದೆ.

ವರದಿ : ಕಾಂತರಾಜು, ಪಿ.ಆರ್.ಓ.

---

# ಕಾಳಜಿ ಹಾಗೂ ವಾತ್ಸಲ್ಯದ ಆರೋಗ್ಯ ಸೇತುವೆಯೇ ದಾದಿ

**– ನಾಗಣ್ಣ, ನರ್ಸಿಂಗ್ ವಿಭಾಗದ ಮುಖ್ಯಸ್ಥರು, ಸಿದ್ಧಗಂಗಾ ಆಸ್ಪತ್ರೆ**

ವಿಶ್ವದಾದಿಯರ ಅಧಿಕೃತ ದಿನವಾಗಿ ಆಚರಿಸಿ (ಮೇ.೧೨) ಕೆಲವೇ ದಿನಗಳು ಕಳೆದಿವೆ. ವಿಶ್ವ ತಾಯಂದಿರ ದಿನದ ಮುನ್ನವೇ ಆಚರಿಸುತ್ತಿರುವ ಈ ವಿಶ್ವ ದಾದಿಯರ ದಿನ ತಾಯಿಗೂ ಹಾಗೂ ದಾದಿಗೂ ಬಹಳಷ್ಟು ಸಾಮ್ಯತೆಯನ್ನು ಹೊಂದಿದೆ.

ಹೇಗೆ ತಾಯಿಯೊಬ್ಬಳು ಮಗುವಿಗೆ ಜನ್ಮನೀಡಿ ಕಾಳಜಿ, ಮಮತೆ ಹಾಗೂ ವಾತ್ಸಲ್ಯಗಳಿಂದ ಮಗುವಿನ ಭವಿಷ್ಯದ ಬಗ್ಗೆ ಶ್ರಮಿಸುವವಳೋ ಹಾಗೆ ದಾದಿಯೂ ಕೂಡ ಎರಡನೇ ತಾಯಿಯಂತೆ ಪ್ರತಿಯೊಂದು ರೋಗಿಯನ್ನು ವಾತ್ಸಲ್ಯ, ಮಮತೆ ಕರ್ತವ್ಯ ಪ್ರಜ್ಞೆಯಿಂದ ರೋಗಿ ಗುಣಮುಖವಾಗಲು ಶ್ರಮಿಸುತ್ತಾಳೆ. ಇದರಲ್ಲಿ ಪುರುಷ ದಾದಿಗಳೂ ಕೂಡ ಒಳಗೊಂಡಿದ್ದಾರೆ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಿಲ್ಲ.

## ಒತ್ತಡದಲ್ಲಿಯೂ ಕರ್ತವ್ಯ ಪ್ರಜ್ಞೆ:

ಒಂದು ಆಸ್ಪತ್ರೆಗೆ ವ್ಯಕ್ತಿಯೊಬ್ಬ ದಾಖಲಾದರೆ ಆತನಿಗೆ ಪ್ರಥಮ ಚಿಕಿತ್ಸೆ ನೀಡುವುದರಿಂದ ಆರಂಭವಾಗಿ ಆತ ಡಿಸ್ಚಾರ್ಜ್ ಆಗಿ ತೆರಳುವಾಗ ಶುಭ ಹಾರೈಸಿ ಕಳುಹಿಸುವವರೆಗೂ ದಾದಿಯರ ಅಪಾರ ಶ್ರಮವಿರುತ್ತದೆ. ಒಬ್ಬ ರೋಗಿಯ ಕಾಳಜಿಯಿಂದ ಗುಣಮುಖವಾಗುವ ಹಾದಿಯಲ್ಲಿ ಆತನ ಪ್ರತಿಯೊಂದು ಆರೋಗ್ಯ ಏರಿಳಿತಗಳನ್ನು ದಾಖಲಿಸಿಕೊಂಡು,ವೈದ್ಯರ ಸಲಹೆ ಸೂಚನೆಗಳನ್ನು ಪಾಲಿಸಿಕೊಂಡು ಜೊತೆಗೆ ನಿಯಮಿತವಾಗಿ ಔಷಧೋಪಚಾರಗಳನ್ನು ನೀಡುವ ಕೆಲಸ ಬಹಳ ಒತ್ತಡದದ್ದು. ಚಿಕಿತ್ಸೆಯಲ್ಲಿ ಒಂದು ಸಣ್ಣ ವ್ಯತ್ಯಾಸವಾದರೂ ರೋಗಿಯ ಜೀವಕ್ಕೇ ಅಪಾಯ ಉಂಟಾಗುವ ಸಂದರ್ಭದಲ್ಲಿ ಸದಾ ಒತ್ತಡದಲ್ಲಿಯೇ ಮುಗುಳ್ನಗುತ್ತಾ ಕೆಲಸ ನಿರ್ವಹಿಸುವ ದಾದಿಯರ ಶ್ರಮಕ್ಕೆ ನಾವು ಕೃತಜ್ಞತೆ ಸಲ್ಲಿಸಲೇಬೇಕು.

**ಆಸ್ಪತ್ರೆಯ ಬೆನ್ನೆಲುಬು:** ಒಂದು ಆಸ್ಪತ್ರೆ ಯಶಸ್ವಿಯಾಗಬೇಕಾದರೆ ಆ ಆಸ್ಪತ್ರೆಯ ಪ್ರಮುಖ ಶಕ್ತಿ ದಾದಿಯರು. ಏಕೆಂದರೆ ರೋಗಿ ಯಾವುದೇ ಪರಿಸ್ಥಿತಿಯಲ್ಲಿ ಆಸ್ಪತ್ರೆಗೆ ಬಂದರೂ ಕೂಡ ವೈದ್ಯರು ಆಗಮಿಸುವ ಮುನ್ನವೇ ಪ್ರಥಮ ಚಿಕಿತ್ಸೆ ನೀಡುವುದು. ಅವರ ಆರೋಗ್ಯದ ಪ್ರತಿಯೊಂದು ದಾಖಲಾತಿಗಳನ್ನು ದಾಖಲಿಸುವುದು ಸೇರಿದಂತೆ ಪ್ರಾಥಮಿಕ ವೈದ್ಯಕೀಯ ಕರ್ತವ್ಯಗಳೆಲ್ಲವನ್ನೂ ಪೂರೈಸುವ ದಾದಿಯರು ಆಸ್ಪತ್ರೆಯ ಮೂಲ ಶಕ್ತಿ ಬೆನ್ನೆಲುಬು ಎಂದರೆ ತಪ್ಪಾಗಲಾರದು.

**ವಿಶ್ವಮಾನ್ಯತೆ:** ನಮ್ಮ ಭಾರತೀಯ ದಾದಿಯರ ಸೇವೆ ವಿಶ್ವದ ನರ್ಸಿಂಗ್ ವಿಭಾಗದಲ್ಲಿ ಅಗ್ರಸ್ಥಾನದಲ್ಲಿದೆ ಎಂಬುದು ಬಹಳ ಹೆಮ್ಮೆಯ ವಿಷಯ. ಭಾರತೀಯ ದಾದಿಯರು ವಿಶ್ವದ ಯಾವುದೇ ಪ್ರತಿಷ್ಠಿತ ಆಸ್ಪತ್ರೆಗೆ ಕೆಲಸಕ್ಕಾಗಿ ಒಂದು ಅರ್ಜಿ ಸಲ್ಲಿಸಿದರೆ ಸಾಕು ಅಂತಹ ಎಲ್ಲಾ ಆಸ್ಪತ್ರೆಗಳಲ್ಲಿ ನಮ್ಮ ಭಾರತೀಯ ದಾದಿಯರಿಗೆ ಸದಾ ಒಂದು ಸ್ಥಾನ ಮೀಸಲಿದ್ದೇ ಇರುತ್ತದೆ. ಇದಕ್ಕೆ ಕಾರಣ ಭಾರತೀಯ ಸಂಸ್ಕೃತಿ. ನಮ್ಮ ಸಂಸ್ಕೃತಿಯಲ್ಲಿರುವ ಕೂಡು ಕುಟುಂಬ ವ್ಯವಸ್ಥೆ, ಪರಸ್ಪರ ಪ್ರೀತಿ, ಗೌರವದಿಂದ ನಡೆದುಕೊಳ್ಳುವ ಗುಣ ಜೊತೆಗೆ ಸಂಸ್ಕೃತಿಯ ಭಾಗವಾಗಿರುವ ಸಹಬಾಳ್ವೆ ಕಾರಣ. ಕರ್ತವ್ಯ ಹಾಗೂ ಸೇವೆ ಎರಡನ್ನೂ ಒಳಗೊಂಡಿರುವ ಸೇವೆಯಲ್ಲಿ ದಾದಿಯರು ಜೀವನದ ಉದ್ದಕ್ಕೂ ಗೌರವಕ್ಕೆ ಅರ್ಹರಾಗಿರುತ್ತಾರೆ. ಜೊತೆಗೆ ಸ್ವಂತ ನಿರ್ಣಯದ ಮೇಲೆ ಅಗತ್ಯ ಚಿಕಿತ್ಸೆ ನೀಡುವ ಅಧಿಕಾರವನ್ನೂ ಹೊಂದಿರುತ್ತಾರೆ.



**ಆತ್ಮವಿಶ್ವಾಸವೆಂದರೆ ದಾದಿಯರು:** ಯಾವುದೇ ರೋಗಿಯ ಚಿಕಿತ್ಸೆಯ ಬಗ್ಗೆ ಅಭಿಪ್ರಾಯ ಕೇಳಿದರೆ ಆತ ಹೇಳುವ ಪ್ರಥಮ ವಿಚಾರವೇ ದಾದಿಯರ ಆತ್ಮವಿಶ್ವಾಸದ ಮಾತುಗಳ ಬಗ್ಗೆ. ದಾದಿಯರಿಗೆ ನಾವು ನೀಡುವ ತರಬೇತಿಯಲ್ಲಿ ರೋಗಿಗಳಿಗೆ ಆತ್ಮವಿಶ್ವಾಸ ತುಂಬುವುದೇ ಪ್ರಥಮ ಅಧ್ಯಾಯವಾಗಿರುತ್ತದೆ. ರೋಗಿಯ ಗುಣಮುಖವಾಗುವಲ್ಲಿ ಔಷಧಿಯಷ್ಟೇ ಪರಿಣಾಮಕಾರಿ ರೋಗಿಗೆ ನಾವು ನೀಡುವ ಧೈರ್ಯ ಎಂಬುದು ಪ್ರತಿಯೊಬ್ಬ ದಾದಿಯೂ ತನ್ನ ಕರ್ತವ್ಯದಲ್ಲಿ ಕಂಡುಕೊಂಡಿರುವ ಸತ್ಯ.

**ವಿಶ್ರಾಂತ ಜೀವನಕ್ಕೆ ಬೇಕಿದೆ ಆರ್ಥಿಕ ಭದ್ರತೆ:** ನಾವು ದಾದಿಯರ ಬಗ್ಗೆ ಎಷ್ಟು ಹೊಗಳಿಕೆಯ ಮಾತುಗಳನ್ನಾಡಿದರೂ ಅವರ ವಿಶ್ರಾಂತ ಜೀವನ ಅಂದರೆ, ನಿವೃತ್ತಿ ಜೀವನದ ಆರ್ಥಿಕ ಭದ್ರತೆಯ ಕುರಿತು ಮಾತನಾಡಬೇಕಿದೆ. ತನ್ನ ನಿವೃತ್ತಿಯ ಅಂಚಿನವರೆಗೂ ಕರ್ತವ್ಯ ನಿರ್ವಹಿಸುವ ದಾದಿಯರು ವಯೋಸಹಜವಾಗಿ ದೈಹಿಕ ಕ್ಷಮತೆಯನ್ನು ಕಳೆದುಕೊಂಡು ಮನೆಯಲ್ಲಿರುವ ಪರಿಸ್ಥಿತಿ ಬಂದಾಗ ಸರ್ಕಾರ ಹಾಗೂ ವೈದ್ಯಕೀಯ ಸಂಸ್ಥೆಗಳು ಅವರಿಗೆ ಆರ್ಥಿಕ ಭದ್ರತೆ ಒದಗಿಸುವಂತಹ ಯೋಜನೆಗಳನ್ನು ರೂಪಿಸಬೇಕು. ಸರ್ಕಾರಿ ಆಸ್ಪತ್ರೆಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಕೆಲಸ ನಿರ್ವಹಿಸುವ ಎಲ್ಲರಿಗೂ ಉದ್ಯೋಗ ಭದ್ರತೆ ದೊರೆಯಬೇಕು. ಖಾಸಗೀ ಆಸ್ಪತ್ರೆಗಳೂ ಕೂಡ ತಮ್ಮ ಆಸ್ಪತ್ರೆಗೆ ಶ್ರಮಿಸಿದ ನರ್ಸಿಂಗ್ ಸಿಬ್ಬಂದಿಗೆ ಜೀವನ ಭದ್ರತೆ ಒದಗಿಸುವ ಪ್ರತಿಜ್ಞೆ ಮಾಡಬೇಕು. ಅಗಾದಾಗ ಮಾತ್ರ ದಾದಿಯರ ಬದುಕು ಹಸನಾಗುತ್ತದೆ. ಜೀವನವಿಡೀ ಇನ್ನೊಬ್ಬರ ಆರೋಗ್ಯ ಕಾಳಜಿಗಾಗಿ ಶ್ರಮಿಸುವ ದಾದಿಯರ ಜೀವನವನ್ನು ರೂಪಿಸಬೇಕಿರುವುದು ಸಮಾಜದ ಆದ್ಯ ಕರ್ತವ್ಯವೂ ಹೌದು!

| | |
|---|---|
| ಒಬ್ಬರ ಮನವ ನೋಯಿಸಿ,<br>ಒಬ್ಬರ ಮನವ ಘಾತವ ಮಾಡಿ,<br>ಗಂಗೆಯಮುಳುಗಿದಡೇನಾಗುವುದಯ್ಯಾ?<br>ಚಂದ್ರನು ಗಂಗೆಯ ತಡಿಯಲ್ಲಿದ್ದಡೇನು?<br>ಕಲಂಕ ಬಿಡದಾಯಿತ್ತಯ್ಯಾ.<br>ಅದು ಕಾರಣ, ಮನವ ನೋಯಿಸದವನೆ,<br>ಒಬ್ಬರ ಘಾತವ ಮಾಡಿದವನೆ,<br>ಪರಮಪಾವನ ನೋಡಾ,<br>ಕಪಿಲಸಿದ್ಧಮಲ್ಲಿಕಾರ್ಜುನಾ.<br>– ಸಿದ್ಧರಾಮ | ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ,<br>ಕಾಮಿನಿ ನಿನ್ನವಳಲ್ಲ ಅವು ಜಗಕಿಕ್ಕಿದ ವಿಧಿ,<br>ನಿನ್ನೊಡವೆಯೆಂಬುದು ಗುರು ಲಿಂಗ ಜಂಗಮಕ್ಕೆ<br>ದಾಸೋಹ ಮಾಡುವ ಜ್ಞಾನರತ್ನ<br>ಅಂತಪ್ಪ ದಿವ್ಯರತ್ನವ ಕೆಡಗುಡದೆ<br>ಆ ರತ್ನವ ನೀನಲಂಕರಿಸಿದೆಯಾದಡೆ<br>ನಮ್ಮ ಗುಹೇಶ್ವರ ಲಿಂಗದಲ್ಲಿ<br>ನಿನ್ನಿಂದ ಬಿಟ್ಟು ಸಿರಿವಂತರಾರು<br>ಇಲ್ಲಿ ಕಾಣಾ ಎಲೆ ಮನವೆ.<br>– ಅಲ್ಲಮಪ್ರಭು |



ಅರೋಗ್ಯ

# ಯಕೃತ್ ಆರೋಗ್ಯ ಕಾಪಾಡಿ


– ಡಾ. ಎಂ.ಎಸ್. ರಾಜಣ್ಣ *


**ಯಕೃತ್** ಜೀರ್ಣಾಂಗ ವ್ಯವಸ್ಥೆಯ ಪ್ರಮುಖ ಅಂಗ. ಇದರ ಆರೋಗ್ಯವನ್ನು ಕಾಪಾಡಿಕೊಳ್ಳಲು ಉತ್ತಮ ಜೀವನಶೈಲಿ ಜತೆ ನಿಯಮಿತ ತಪಾಸಣೆಯೂ ಮುಖ್ಯ. ಯಕೃತ್ ಜೀರ್ಣಾಂಗ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ನಾವು ಸೇವಿಸುವ ಆಹಾರದಲ್ಲಿ ಅನೇಕ ವಿಷ ಪದಾರ್ಥಗಳಿರುತ್ತವೆ. ಈ ವಿಷ ಪದಾರ್ಥಗಳನ್ನು ಇದು ತೆಗೆದು ಹಾಕುತ್ತದೆ. ಸೇವಿಸುವ ಆಹಾರದಲ್ಲಿರುವ ಪ್ರೊಟೀನ್, ಕಾರ್ಬೋಹೈಡ್ರೇಟ್, ಕೊಬ್ಬನ್ನು ಜೀರ್ಣ ಮಾಡಲು ಯಕೃತ್ ಸಹಕಾರಿ. ಆಹಾರ ಸೇವಿಸಿದಾಗ ರಕ್ತದಲ್ಲಿ ಗ್ಲೂಕೋಸ್ ಬಿಡುಗಡೆಯಾಗುತ್ತದೆ. ಯಕೃತ್ ರಕ್ತದಲ್ಲಿ ಸಕ್ಕರೆ ಅಂಶ ಜಾಸ್ತಿಯಾಗದಂತೆ ಕಾರ್ಯ ನಿರ್ವಹಿಸುತ್ತದೆ. ಸಕ್ಕರೆ ಪ್ರಮಾಣ ಖಾಲಿ ಹೊಟ್ಟೆಯಲ್ಲಿ ೧೨೦ ಮಿಲಿ.ಗ್ರಾಂ ಇರಬೇಕು. ಊಟವಾದ ನಂತರ ೧೮೦ ಮಿಲಿ.ಗ್ರಾಂ ಅನ್ನು ಮೀರಬಾರದು. ಒಂದು ವೇಳೆ ಆರೋಗ್ಯವಂತರಲ್ಲಿ ಈ ಮಿತಿ ೧೨೦-೧೮೦ಕ್ಕಿಂತಲೂ ಹೆಚ್ಚಾಗಿದ್ದಲ್ಲಿ ಯಕೃತ್ ಗ್ಲೂಕೋಸನ್ನು ಗ್ಲೈಕೋಜನ್ ಆಗಿ ಪರಿವರ್ತಿಸಿ ಶೇಖರಿಸುತ್ತದೆ. ಯಾವುದೋ ಕಾರಣದಿಂದ ಊಟ ಮಾಡದೆ ಹೆಚ್ಚು ಹಸಿವಾದಾಗ ಶೇಖರಿಸಿರುವ ಗ್ಲೈಕೋಜನನ್ನು ಗ್ಲೈಕೋಜನಾಲಿಸಿಸ್, ನಿಯೋಗ್ಲೂಕೋಜನಸಿಸ್ ಆಗಿ ಪರಿವರ್ತಿಸಿ ರಕ್ತದಲ್ಲಿ ಗ್ಲೂಕೋಸ್ ಅಂಶ ಸಮಸ್ಥಿತಿಲ್ಲಿರುವಂತೆ ಕಾಪಾಡುತ್ತದೆ.



**ತೊಂದರೆಗಳು:** ಆರೋಗ್ಯಕರ ದೇಹಕ್ಕೆ ಅಗತ್ಯಗಳನ್ನು ಪೂರೈಸುವ ಯಕೃತ್ ಒಮ್ಮೊಮ್ಮೆ ತೊಂದರೆಗೆ ಒಳಗಾಗುತ್ತದೆ. ಪ್ರೋಟೋಜವಾ, ಎಂಟಾಮೀಬಾ, ಹಿಸ್ಟೋಲಿಕಾದಿಂದಾಗಿ ಕೀವು ತುಂಬಿ ಬಾವು ಉಂಟಾಗಬಹುದು. ವೈರಸ್ ರೋಗಗಳಾದ ಹೆಪಟೈಟಿಸ್, ಹೆಪಟೈಟಿಸ್-ಇ ಇವೆರಡೂ ಕಲುಷಿತವಾದ ನೀರಿನ ಮುಖಾಂತರ ಹರಡುವುದು. ಹೆಪಟೈಟಿಸ್-ಬಿ ತೀವ್ರತರ ಕೆಟ್ಟ ವೈರಸ್. ಇದು ಯಕೃತ್ ಅನ್ನೇ ಹಾಳು ಮಾಡುತ್ತದೆ. ಅದೃಷ್ಟವಶಾತ್ ಹೆಪಟೈಟಿಸ್-ಬಿ ಬಾರದಂತೆ ವ್ಯಾಕ್ಸಿನ್ ಲಭ್ಯವಿದೆ. ಚಿಕ್ಕ ಮಕ್ಕಳಿರುವಾಗಲೇ ೩ ಸಲ ಈ ವ್ಯಾಕ್ಸಿನ್ ನೀಡಲಾಗುತ್ತದೆ. ಹೆಪಟೈಟಿಸ್-ಸಿ ಅಷ್ಟೇ ಅಪಾಯಕಾರಿ ವೈರಸ್. ಹೆಪಟೈಟಿಸ್- ಬಿ, ಸಿ, ಡಿ, ಲೈಂಗಿಕ ಸಂಪರ್ಕದಿಂದ, ಕಲುಷಿತ ಸೂಜಿ, ಸಿರಂಜ್ ಬಳಕೆಯಿಂದ ರಕ್ತ ಪಡೆಯುವುದರಿಂದ ಹರಡುತ್ತದೆ. ಆದ್ದರಿಂದ ಎಚ್ಚರಿಕೆಯಿಂದ ಇರಬೇಕು. ಆಲ್ಕೋಹಾಲ್ ಸೇವನೆ ಯಕೃತ್ತಿನ ವೈರಿ.

ಯಾವ ಕೊಬ್ಬು ಚಳಿಗಾಲದಲ್ಲಿ ಗಟ್ಟಿಯಾಗುವುದೋ ಅದು ಆರೋಗ್ಯಕ್ಕೆ ಒಳ್ಳೆಯದಲ್ಲ. ತುಪ್ಪ, ಬೆಣ್ಣೆ, ಮಟನ್ ಬದಲಾಗಿ, ಚಳಿಗಾಲದಲ್ಲಿ ನೀರಿನಂತಿರುವ ಕಡ್ಲೆಕಾಯಿ ಎಣ್ಣೆ, ರಿಫೈಂಡ್ ಎಣ್ಣೆ, ಹುಚ್ಚೆಳ್ಳೆಣ್ಣೆ, ಆರೋಗ್ಯಕ್ಕೆ ಒಳ್ಳೆಯದು. ಇತ್ತೀಚೆಗೆ ನಾನ್ ಆಲ್ಕೋಹಾಲಿಕ್ ಫ್ಯಾಟಿ ಲಿವರ್ ಸಮಸ್ಯೆ ಹೆಚ್ಚಿದೆ. ಪ್ರಾರಂಭದಲ್ಲಿ ಉರಿ ಊತ, ನಂತರ ಫ್ಯಾಟಿ ಲಿವರ್ ಸಮಸ್ಯೆ ತೀವ್ರತರವಾದಾಗ ಮೊದಲಿನ ಸ್ಥಿತಿಗೆ ತರಲಾಗದು. ಈ ಸಮಸ್ಯೆ ಸ್ಥೂಲಕಾಯ/ಬೊಜ್ಜಿನ ಸಮಸ್ಯೆ ಇರುವವರಲ್ಲಿ, ಡಯಾಬಿಟಿಸ್ ವ್ಯಕ್ತಿಗಳಲ್ಲಿ ಕಂಡುಬರುತ್ತದೆ. ಹೀಗಾಗಿ ಯಕೃತ್ತಿನ ಆರೋಗ್ಯದ ಬಗ್ಗೆ ಎಚ್ಚರಿಕೆ ವಹಿಸಿ.


* ನಿವೃತ್ತ ಪ್ರಾಧ್ಯಾಪಕರು ಹಾಗೂ ವಿಭಾಗದ ಮುಖ್ಯಸ್ಥರು, ಸಮುದಾಯ ಶಾಸ್ತ್ರ ವಿಭಾಗ, ಸಿದ್ಧಾರ್ಥ ಮೆಡಿಕಲ್ ಕಾಲೇಜು, ತುಮಕೂರು. ಮೊ: ೯೪೪೯೧ ೪೪೩೦೮



**ರಕ್ಷಣೆ ಸೂತ್ರ:**

- ಮದ್ಯಪಾನ ಮತ್ತು ಧೂಮಪಾನ ತ್ಯಜಿಸಬೇಕು.
- ಹೆಪಟೈಟಿಸ್ ಬಿ ಮತ್ತು ಸಿ ರೋಗವನ್ನು ತಡೆಗಟ್ಟಲು ಸಕಾಲದಲ್ಲಿ ಲಸಿಕೆ ಹಾಕಿಸಿಕೊಳ್ಳಬೇಕು.
- ಮಧುಮೇಹ ಮತ್ತು ಅಧಿಕ ರಕ್ತದೊತ್ತಡ ರೋಗವನ್ನು ಹತೋಟಿಯಲ್ಲಿಡಬೇಕು.
- ಜೀವನಶೈಲಿ, ಆಹಾರ ಪದ್ಧತಿಯಲ್ಲಿ ಸಮತೋಲನ ಕಾಪಾಡಿಕೊಳ್ಳಬೇಕು.
- ದೇಹದಲ್ಲಿ ಹೆಚ್ಚು ಕೊಬ್ಬು ಶೇಖರಣೆಯಾಗದಂತೆ ನೋಡಿಕೊಳ್ಳಬೇಕು.

ಎಚ್ಚರವಹಿಸಿ : ಆಧುನಿಕ ಜೀವನಶೈಲಿ ಮತ್ತು ಆಹಾರ ಪದ್ಧತಿಯು ಯಕೃತ್ತಿಗೆ ಒತ್ತಡ ಮತ್ತು ಹಾನಿಯನ್ನು ಉಂಟುಮಾಡಬಹುದು. ಯಕೃತ್ ರಕ್ತ ಹೆಪ್ಪುಗಟ್ಟಲು ಅಗತ್ಯವಾಗಿರುವ ಪ್ರೋಟೀನ್‌ಗಳ ಉತ್ಪಾದನೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುವುದರಿಂದ ಅದರ ಸ್ಥಿತಿ ಹದಗೆಟ್ಟಾಗ ಶರೀರದಲ್ಲಿ ಆಗಾಗ ತರಚಿದಂತಹ ಗಾಯುಗಳು ಮತ್ತು ರಕ್ತಸ್ರಾವ ಕಂಡುಬರಬಹುದು. ಯಕೃತ್ ಹಾನಿಗೊಳಗಾದಾಗ ಕಿಬ್ಬೊಟ್ಟೆಯ ನೋವು ಕಾಣಿಸಿಕೊಳ್ಳುತ್ತದೆ. ಹಸಿವು ಕಡಿಮೆಯಾಗುವಿಕೆ ಮತ್ತು ವಾಕರಿಕೆ ಯಕೃತ್ತಿನ ರೋಗವನ್ನು ಮೊದಲೇ ಸೂಚಿಸುವ ಸಂಕೇತ. ಕೊಲೊರೆಕ್ಟಲ್ ಕ್ಯಾನ್ಸರ್‌ನಂತಹ ಕಾಯಿಲೆಗೆ ಯಕೃತ್ ತುತ್ತಾದಾಗ ದೇಹದಲ್ಲಿ ಅತಿಯಾದ ತೂಕ ನಷ್ಟವಾಗುತ್ತದೆ. ನಂಜುಗಳನ್ನು ನಿವಾರಿಸುವ ತನ್ನ ಸಾಮರ್ಥ್ಯವನ್ನು ಯಕೃತ್ತು ಕಳೆದುಕೊಂಡಾಗ ವಾಕರಿಕೆ ಕಾಣಿಸಿಕೊಳ್ಳುತ್ತದೆ. ಪಿತ್ತಜನಕಾಂಗವು ಸರಿಯಾದ ಕ್ರಮದಲ್ಲಿ ಪಿತ್ತರಸವನ್ನು ತೊಡೆದು ಹಾಕಲು ವಿಫಲವಾದಾಗ ಕಣ್ಣು ಮತ್ತು ಚರ್ಮ ಹಳದಿ ಬಣ್ಣಕ್ಕೆ ತಿರುಗುತ್ತದೆ.

ಅರಸರ ಮನೆಯಲ್ಲಿ ಅರಸಿಯಾಗಿಪ್ಪುದರಿಂದ:
ಭಕ್ತರ ಮನೆಯಲ್ಲಿ ತೊತ್ತಾಗಿಪ್ಪುದು ಕರ ಲೇಸಯ್ಯಾ:
'ತಾರೋ ಅಗ್ಘವಣಿಯ, ನೀಡೋ ಪತ್ರೆಯ,
ಲಿಂಗಕ್ಕೆ ಬೋನವ ಹಿಡಿಯೋ' ಎಂಬರು.
'ಕೂಡಲ ಸಂಗನ ಮಹಾಮನೆಯಲ್ಲಿ
ಒಕ್ಕುದನುಣ್ಣೋ ತೊತ್ತೇ' ಎಂಬರು.
* * *
ಉಂಬಲ್ಲಿ ಉಡುವಲ್ಲಿ ಕ್ರೀಯಳಿಯಿತೆಂಬರು:
ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರು.
ಎಂತಯ್ಯಾ, ಅವರ ಭಕ್ತರೆಂಬೆ ?
ಎಂತಯ್ಯಾ, ಅವರ ಯುಕ್ತರೆಂಬೆ ?
ಕೂಡಲಸಂಗಮದೇವ, ಕೇಳಯ್ಯಾ,
ಹೊಲತಿ ಶುದ್ಧನೀರ ಮಿಂದಂತಾಯಿತ್ತಯ್ಯಾ !
* * *
ಆಯುಷ್ಯ ತೀರಿದಲ್ಲದೆ ಮರಣವಿಲ್ಲ:
ಭಾಷೆ ತಪ್ಪಿದಲ್ಲದೆ ದಾರಿದ್ರ್ಯವಿಲ್ಲ.
ಅಂಜಲದೇಕೊ ಲೋಕ ವಿಗುರ್ಬಣೆಗೆ,
ಅಂಜಲದೇಕೊ, ಕೂಡಲಸಂಗಮದೇವಾ, ನಿಮ್ಮಾಳಾಗಿ ?

– ಬಸವಣ್ಣ

ಕಾಯಕ್ಕೆ ನೆಳಲಾಗಿ ಕಾಡಿತ್ತು ಮಾಯೆ,
ಪ್ರಾಣಕ್ಕೆ ಮನವಾಗಿ ಕಾಡಿತ್ತು ಮಾಯೆ,
ಮನಕ್ಕೆ ನೆನಹಾಗಿ ಕಾಡಿತ್ತು ಮಾಯೆ,
ನೆನಹಿಂಗೆ ಅರುಹಾಗಿ ಕಾಡಿತ್ತು ಮಾಯೆ,
ಜಗದ ಜಂಗುಳಿಗೆ ಬೆಂಗೋಲನೆತ್ತಿ ಕಾಡಿತ್ತು ಮಾಯೆ,
ಚೆನ್ನಮಲ್ಲಿಕಾರ್ಜುನಾ,
ನೀನೊಡ್ಡಿದ ಮಾಯೆಯನಾರಿಗೂ ಗೆಲಬಾರದು.
* * *
ಮರವಿದ್ದು ಫಲವೇನು ನೆಳಲಿಲ್ಲದನ್ನಕ್ಕ ?
ಧನವಿದ್ದು ಫಲವೇನು ದಯವಿಲ್ಲದನ್ನಕ್ಕ ?
ಹಸುವಿದ್ದು ಫಲವೇನು ಹಯನಿಲ್ಲದನ್ನಕ್ಕ ?
ರೂಪಿದ್ದು ಫಲವೇನು ಗುಣವಿಲ್ಲದನ್ನಕ್ಕ ?
ಅಗಲಿದ್ದು ಫಲವೇನು ಮನವಿಲ್ಲದನ್ನಕ್ಕ ?
ನಾನಿದ್ದು ಫಲವೇನು ನಿಮ್ಮ ಜ್ಞಾನವಿಲ್ಲದನ್ನಕ್ಕ
ಚೆನ್ನಮಲ್ಲಿಕಾರ್ಜುನ.

– ಅಕ್ಕಮಹಾದೇವಿ



ಅಭಿನಂದನೆ – ವರದಿ

# ಬೆಂಗಳೂರು ಶಿವನಗರದ ಶ್ರೀ ಸಿದ್ಧಗಂಗಾ ಕನ್ನಡ ಪ್ರೌಢಶಾಲೆಯಲ್ಲಿ ೭ ವಿದ್ಯಾರ್ಥಿಗಳು NMMS ಪರೀಕ್ಷೆಯಲ್ಲಿ ಆಯ್ಕೆ




ನಿಂತಿರುವವರು : ಶಾಲಾ ಮುಖ್ಯ ಶಿಕ್ಷಕರಾದ ಶ್ರೀ ಬಿ.ಆರ್. ಸದಾಶಿವಯ್ಯ ಅವರೊಂದಿಗೆ ಶಿಕ್ಷಕ ವೃಂದ ಹಾಗೂ ಸಿಬ್ಬಂದಿ ವರ್ಗದವರು.
ಕುಳಿತಿರುವವರು : ಎಡದಿಂದ ಬಲಕ್ಕೆ : ವಿದ್ಯಾರ್ಥಿಗಳಾದ ವಾತ್ಸಲ್ಯ, ರಕ್ಷಿತಾ, ಬಸವರಾಜು ಎನ್, ಸೈಯದ್, ಜೀವನ ಎಸ್, ಬಸವರಾಜು ಆರ್. ಮತ್ತು ರಾಜೇಶ ಬಾಬು.

ರಾಜ್ಯ ಹಾಗೂ ಕೇಂದ್ರ ಸರ್ಕಾರಗಳ ಸಂಯುಕ್ತ ಆಶ್ರಯದಲ್ಲಿ ಪ್ರತಿವರ್ಷ ೮ನೇ ತರಗತಿ ವಿದ್ಯಾರ್ಥಿಗಳಿಗೆ ನಡೆಸುವ ನ್ಯಾಷನಲ್ ಮೀನ್ಸ್ ಕಮ್ ಮೆರಿಟ್ ವಿದ್ಯಾರ್ಥಿ ವೇತನ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಶಿವನಗರದ ಶ್ರೀ ಸಿದ್ಧಗಂಗಾ ಕನ್ನಡ ಪ್ರೌಢಶಾಲೆಯಲ್ಲಿ ೭ ವಿದ್ಯಾರ್ಥಿಗಳು ನಿಗದಿತ ಅಂಕಕ್ಕಿಂತ ಹೆಚ್ಚು ಅಂಕ ಗಳಿಸಿ ವಿದ್ಯಾರ್ಥಿ ವೇತನ ಪಡೆಯಲು ಅರ್ಹರಾಗಿ ಶಾಲೆಗೆ ಕೀರ್ತಿಯನ್ನು ತಂದಿರುತ್ತಾರೆ. ಆಯ್ಕೆಯಾದ ಎಲ್ಲಾ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಿದವರು ಮುಖ್ಯ ಶಿಕ್ಷಕರಾದ ಶ್ರೀ ಬಿ.ಆರ್. ಸದಾಶಿವಯ್ಯನವರು ಎಂದು ಹೇಳಲು ಅಭಿಮಾನವೆನಿಸುತ್ತದೆ.

ಸರ್ಕಾರಿ ಮತ್ತು ಅನುದಾನಿತ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ೮ನೇ ತರಗತಿ ವಿದ್ಯಾರ್ಥಿಗಳು ಈ ಸ್ಪರ್ಧೆಯಲ್ಲಿ ಭಾಗವಹಿಸಲು ಅರ್ಹತೆಯನ್ನು ಪಡೆದಿರುತ್ತಾರೆ. ವಿದ್ಯಾರ್ಥಿಗಳ ಪೋಷಕರ ವಾರ್ಷಿಕ ವರಮಾನ ೧.೫ ಲಕ್ಷ ರೂ.ಗಳು ಮೀರಿರಬಾರದು ಹಾಗೂ ಏಳನೆ ತರಗತಿಯಲ್ಲಿ ಸಾಮಾನ್ಯ ವರ್ಗದ ವಿದ್ಯಾರ್ಥಿಗಳು ಶೇ. ೫೫ ಹಾಗೂ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳು ಶೇ. ೫೦ ಅಂಕಗಳನ್ನು ಪಡೆದಿರಬೇಕು. ಈ ಪರೀಕ್ಷೆಯಲ್ಲಿ ಆಯ್ಕೆಯಾದ ಅರ್ಹ ವಿದ್ಯಾರ್ಥಿಗಳಿಗೆ ತಿಂಗಳಿಗೆ ೧,೦೦೦ ರೂ.ಗಳಂತೆ ೯, ೧೦, ೧೧ ಹಾಗೂ ೧೨ನೇ ತರಗತಿಯವರೆಗೆ ನಾಲ್ಕು ವರ್ಷಗಳು ವಿದ್ಯಾರ್ಥಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ.

ಈ ಶಾಲೆಯ ವಿದ್ಯಾರ್ಥಿ ಎನ್. ಬಸವರಾಜು ಹಾಗೂ ವಿದ್ಯಾರ್ಥಿನಿ ವಾತ್ಸಲ್ಯ GMAT ಪತ್ರಿಕೆಯಲ್ಲಿ ಬೆಂಗಳೂರು ಉತ್ತರ ಜಿಲ್ಲೆಯಲ್ಲಿ ಹೆಚ್ಚು ಅಂಕ ಗಳಿಸಿ ಮೊದಲ ಸ್ಥಾನ ಹಾಗೂ ದ್ವಿತೀಯ ಸ್ಥಾನವನ್ನು ಪಡೆಯುವುದರೊಂದಿಗೆ ಒಟ್ಟು ೭ ವಿದ್ಯಾರ್ಥಿಗಳು ಆಯ್ಕೆಯಾಗಿ ಶಾಲೆಗೆ ಹಾಗೂ ಸಂಸ್ಥೆಗೆ ಕೀರ್ತಿಯನ್ನು ತಂದಿದ್ದಾರೆ. ಶಾಲೆಯಲ್ಲಿ ಈ ವಿದ್ಯಾರ್ಥಿಗಳಿಗೆ ಸನ್ಮಾನ ಮಾಡಿದ ಸಂದರ್ಭದಲ್ಲಿ ಮಾತನಾಡಿದ ಮುಖ್ಯೋಪಾಧ್ಯಾಯರಾದ ಶ್ರೀ ಬಿ.ಆರ್. ಸದಾಶಿವಯ್ಯ ಅವರು ಪರಮಪೂಜ್ಯ ಶ್ರೀಗಳವರ ದಿವ್ಯಾಶೀರ್ವಾದ ಹಾಗೂ ಸಂಸ್ಥೆಯ ವತಿಯಿಂದ ಶಿಕ್ಷಕರಿಗೆ ತರಬೇತಿ ಕಾರ್ಯಗಾರ ನಡೆಸಿ ಅದರ ಪ್ರಯೋಜನ ಪಡೆಯಲು ಅವಕಾಶ ಮಾಡಿಕೊಟ್ಟು ಮಾರ್ಗದರ್ಶನ ನೀಡಿದ ಸಂಸ್ಥೆಯ ಎಲ್ಲಾ ಅಧಿಕಾರಿ ವೃಂದದವರನ್ನು ಕೃತಜ್ಞತೆಯಿಂದ ಸ್ಮರಿಸಿದರು.

ಈ ಸಾಧನೆಗೆ ಇಲಾಖೆಯ ಮಾರ್ಗದರ್ಶನ ಹಾಗೂ ಪ್ರಾಥಮಿಕ ಶಾಲೆಯ ಮುಖ್ಯ ಶಿಕ್ಷಕರು, ಸಂಸ್ಕೃತ ಶಾಲೆಯ ಮುಖ್ಯ ಶಿಕ್ಷಕರು ಹಾಗೂ ಶಾಲೆಯ ಎಲ್ಲಾ ಶಿಕ್ಷಕ ವೃಂದ ಹಾಗೂ ಸಿಬ್ಬಂದಿ ವರ್ಗದವರ ಸಹಕಾರ ಎಂದು ತಿಳಿಸುತ್ತಾ, ಮುಂದಿನ ವರ್ಷಗಳಲ್ಲಿ ಇನ್ನೂ ಹೆಚ್ಚಿನ ವಿದ್ಯಾರ್ಥಿಗಳು ಆಯ್ಕೆಯಾಗಲು ಶ್ರಮಿಸುವುದಾಗಿ ಹೇಳಿದರು.

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ ನಗದು/ಚೆಕ್/ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (LM) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಾರ್ಡಿನಲ್ಲಿ ಬರೆದು ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ.

ಪ್ರಕಾಶಕರು,
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪.
ದೂರವಾಣಿ : ೦೮೧೬-೨೨೮೨೩೨೨

